# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು : ಎಚ್ಚೆಸ್ಕೆ

ಈ ಸಂಚಿಕೆಯಲ್ಲಿ




ಜೂನ್ ೧೯೮೩

೨

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂಗಳೂರು 560 002


ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

Telegrams : SRIKMILLS, MYSORE
Telex : 0846/220 SKRM IN

Phones : 23666 ; 23766 ; 23254 ; 23722 ;



# SRI KRISHNARAJENDRA MILLS LIMITED

**Bangalore Road, MYSORE—570 003**

*Manufacturers of Yarn :*

SPINNERS OF HIGH CLASS 6s TO 120s YARN. COTTON, STAPLE FIBRE AND POLYESTER BLEND ALSO DOUBLING

*Manufacturers of Cloth :*

HIGH CLASS POPLINS, PRINTS, CAMBRICS, CURTAIN CLOTH, CASEMENT, DRILL, SUITINGS, POLYESTER COTTON AND 100% POLYESTER PRINTED SHIRTINGS, BEDSHEETS, LONGCLOTH AND PRINTED LUNGIES

**APPROVED SUPPLIERS TO D.G.S. & D.**

# ಬ್ಯಾಂಕಿಂಗ್ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ
ಅರ್ಧವಾರ್ಷಿಕ

**ಸಂಪುಟ ೪ ಸಂಚಿಕೆ ೧**
**ಏಪ್ರಿಲ್ ೧೯೮೩**

ಸಂಪಾದಕ
**ಎಚ್ಚೆಸ್ಕೆ**

**ಸಲಹಾ ಮಂಡಲಿ**

ಡಾ. ಡಿ. ಎಂ. ನಂಜುಂಡಪ್ಪ
ಡಾ. ಕೆ. ಪುಟ್ಟಸ್ವಾಮಯ್ಯ
ಸಿ. ಎಸ್. ಶೇಷಾದ್ರಿ, ಐ.ಎ.ಎಸ್. (ನಿವೃತ್ತ)
ಸೂ. ಸುಬ್ರಹ್ಮಣ್ಯಂ
ಆರ್. ಎನ್. ಗೋಡ್ಬೋಲೆ
ಡಾ. ಎಂ. ಮಾದಯ್ಯ

ಶೀರ್ಷಿಕೆ ವಿನ್ಯಾಸ : ಗಿರಿಧರ ಖಾಸನೀಸ

**ಸಮನ್ವಯ ಸಮಿತಿ (ರಿ.)**
**(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)**
**ಭಾರತೀಯ ಸ್ಟೇಟ್ ಬ್ಯಾಂಕ್**
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

**ವಾರ್ಷಿಕ ಚಂದಾ ರೂ. ೭**
**ಆಜೀವ ಚಂದಾ ರೂ. ೧೦೦**
**ಬಿಡಿ ಪ್ರತಿ ರೂ. ೪**

## 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ)

69 ಗುರುರಾಜ ಮಳ್ಳಿ

70 ವೆಂ. ನಂ. ವಿಶ್ವನಾಥ ಶೆಟ್ಟಿ

71 ವಿ. ಇಂದಿರಾ

72 ಎಸ್. ಪ್ರಕಾಶ್

73 ರಾ. ರಾ. ದೇಸಾಯಿ

74 ವೆಂಕಟಸುಬ್ಬಯ್ಯ

75 ಕಟಕೋಳ ಕೋ-ಆಪರೇಟಿವ್ ಬ್ಯಾಂಕು, ಕಟಕೋಳ

76 ಚಂದ್ರಶೇಖರ

77 ಬಿಜಾಪುರ ಶ್ರೀ ಸಿದ್ಧೇಶ್ವರ ಅರ್ಬನ್ ಕೋ-ಆಪರೇಟಿವ್ ಬ್ಯಾಂಕು, ಬಿಜಾಪುರ 586 101

78 ಬೆಲ್ಲದ ಬಾಗೇವಾಡಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕು, ಬೆಲ್ಲದ ಬಾಗೇವಾಡಿ-591 305

79 ಪ್ರಗತಿ ಕೋ-ಆಪರೇಟಿವ್ ಬ್ಯಾಂಕು, ಬೆಂಗಳೂರು 560 003

80 ಸಿಬ್ಬಂದಿ ತರಬೇತಿ ಕೇಂದ್ರ, ಭಾರತೀಯ ಸ್ಟೇಟ್ ಬ್ಯಾಂಕು, ಬೆಂಗಳೂರು-560 005

81 ಕರಜಗಿ ಕೋ-ಆಪರೇಟಿವ್ ಬ್ಯಾಂಕು, ಕರಜಗಿ

82 ಜಿ. ಜಿ. ವಿಷ್ಣುಮೂರ್ತಿ

83 ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕು, ಬೆಂಗಳೂರು 560 019

84 ಪಿ. ಇ. ಎಸ್. ವಿಜ್ಞಾನ ಕಾಲೇಜು, ಮಂಡ್ಯ 571 401

85 ಕೆ. ಕೆ. ಮೂರ್ತಿ

86 ಮೇ. ಕೃ. ಅನಂತಸ್ವಾಮಿ

ನಮ್ಮ ಓದುಗರು ಹೆಚ್ಚಿನ ಸಂಖ್ಯೆಯಲ್ಲಿ ಆಜೀವ ಚಂದಾದಾರರಾಗಿ 'ಬ್ಯಾಂಕಿಂಗ್ ಪ್ರಪಂಚ'ವನ್ನು ಬಲಪಡಿಸಬೇಕೆಂದು ಕೋರಿಕೆ.

ಆಜೀವ ಚಂದಾ ರೂ. 100ನ್ನು **'ಸಮನ್ವಯ ಸಮಿತಿ'ಯ** ಹೆಸರಿಗೆ ಬರೆದ ಚೆಕ್ ಅಥವಾ ಡ್ರಾಫ್ಟ್ ಮೂಲಕ ಕಳುಹಿಸಬಹುದು.


**ಸಮನ್ವಯ ಸಮಿತಿ (ನೋಂದಾಯಿತ)**

(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

**ದ್ವಾರಾ : ಭಾರತೀಯ ಸ್ಟೇಟ್ ಬ್ಯಾಂಕ್**

ಬೆಂಗಳೂರು ನಗರ ಶಾಖೆ

೨೨ ಜಯಚಾಮರಾಜ ಒಡೆಯರ್ ರಸ್ತೆ

ಬೆಂಗಳೂರು ೫೬೦ ೦೦೨

# ಬ್ಯಾಂಕಿಂಗ್ ಪ್ರಪಂಚ

**ಈ ಸಂಚಿಕೆಯ ಲೇಖನದಾರರು**

**ಕೆ. ಎನ್. ಮಹಾಬಲ,** ಉದ್ಯೋಗಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಬಿ. ಎಸ್. ಚಂದ್ರಶೇಖರ,** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಎಸ್. ಎನ್. ಪಂಚಾಕ್ಷರಪ್ಪ,** ಸಹಾಯಕ ಸಂಪಾದಕ, ಕರ್ನಾಟಕ ರಾಜ್ಯ ಹಣಕಾಸು ನಿಗಮ, ಬೆಂಗಳೂರು

**ಪು. ರಾ. ಮುರಳೀಧರ,** ಕೆನರಾ ಬ್ಯಾಂಕ್, ದಕ್ಷಿಣ ವೃತ್ತ ಕಛೇರಿ, ಬೆಂಗಳೂರು 1

**ಅ. ಚ. ಅಶೋಕ ಕುಮಾರ,** ವ್ಯವಸ್ಥಾಪಕ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶಿವನಸಮುದ್ರ 571 437

**ಜಿ. ಎನ್. ನರಸಿಂಹಮೂರ್ತಿ,** ಮುಖ್ಯ ಕೋಶಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ 583 201

**ಸಾ. ಅ. ಮಂಜುನಾಥ,** 45–5/1, 'ಶಂಕರ ಕೃಪ' ಹಿಂಭಾಗ, 16ನೆಯ ಅಡ್ಡ ರಸ್ತೆ, 3ನೆಯ ವಿಭಾಗ, ಜಯನಗರ, ಬೆಂಗಳೂರು 560 002

**ಎಂ. ವಿ. ಎಂ. ಪ್ರಸಾದ್,** ಭಾರತೀಯ ಸ್ಟೇಟ್ ಬ್ಯಾಂಕ್, ಗುಲ್ಬರ್ಗ 560 009

**ಎಸ್. ರಾಚಯ್ಯ,** ಜೆ. ಪಿ. ಪೋರ ಕಲಾ ಮತ್ತು ವಾಣಿಜ್ಯ ವಿದ್ಯಾಲಯ, ಸಿಂದಗಿ 586 128

---

ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯಗಳು ಸಂಪಾದಕರವು ಅಥವಾ ಸಮನ್ವಯ ಸಮಿತಿಯವು ಆಗಿರಬೇಕಾದ್ದಿಲ್ಲ.

# ನಮೂನೆ IV

(ನಿಯಮ 8ನ್ನು ನೋಡಿ)

1 ಪ್ರಕಟಣೆಯ ಸ್ಥಳ — ಬೆಂಗಳೂರು 5 6 0 0 0 2

2 ನಿಯತಕಾಲಿಕದ ಅವಧಿ — ಅರ್ಧವಾರ್ಷಿಕ

3 ಮುದ್ರಕರ ಹೆಸರು — **ಶ್ರೀ ಜಿ. ಎಚ್. ಕೃಷ್ಣಮೂರ್ತಿ**

ರಾಷ್ಟ್ರೀಕತೆ — ಭಾರತೀಯ

ವಿಳಾಸ — ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಗಡಿಯಾರ ಗೋಪುರ ಚೌಕ
ಮೈಸೂರು 570 001

4 ಪ್ರಕಾಶಕರ ಹೆಸರು — **ಶ್ರೀ ಚೋ. ನಂಜಪ್ಪ**

ರಾಷ್ಟ್ರೀಕತೆ — ಭಾರತೀಯ

ವಿಳಾಸ — ಪ್ರಧಾನ ಕಾರ್ಯದರ್ಶಿ
ಸಮನ್ವಯ ಸಮಿತಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು
ಭಾರತೀಯ ಸ್ಟೇಟ್ ಬ್ಯಾಂಕ್
22 ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು 560 002

5 ಸಂಪಾದಕರ ಹೆಸರು — **ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್)**

ರಾಷ್ಟ್ರೀಕತೆ — ಭಾರತೀಯ

ವಿಳಾಸ — 41, ಆರನೆಯ ಮುಖ್ಯ ರಸ್ತೆ
ಸರಸ್ವತೀಪುರ, ಮೈಸೂರು 570 009

6 ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ ಅಥವಾ ಪಾಲುದಾರರ, ಪತ್ರಿಕೆಯ ಮಾಲೀಕರ ಹೆಸರು ವಿಳಾಸಗಳು — **ಸಮನ್ವಯ ಸಮಿತಿ (ರಿ)**
**ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು**
**ಭಾರತೀಯ ಸ್ಟೇಟ್ ಬ್ಯಾಂಕ್ ಬೆಂಗಳೂರು ನಗರ ಶಾಖೆ**
22 ಜಯಚಾಮರಾಜ ರಸ್ತೆ,
ಬೆಂಗಳೂರು 560 002

ನಾನು, ಚೋ. ನಂಜಪ್ಪ ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದವೆಂದು ಈ ಮೂಲಕ ಘೋಷಿಸುತ್ತೇನೆ.

**ಚೋ. ನಂಜಪ್ಪ**
ಪ್ರಕಾಶಕ

# ಸಂಪಾದಕೀಯ

'ಬ್ಯಾಂಕಿಂಗ್ ಪ್ರಪಂಚ' ಮೂರು ವರ್ಷಗಳನ್ನು ಮುಗಿಸಿ ನಾಲ್ಕನೆಯ ವರ್ಷದಲ್ಲಿ ಕಾಲಿರಿಸುತ್ತಿದೆಯೆಂಬುದು, ಉಳಿದವರಿಗೆ ಹೇಗೇ ಅನಿಸಲಿ, ನಮಗಂತೂ ತುಂಬ ಸಂತೋಷದ ಸಂಗತಿ. ಬೇರೆ ಯಾವ ಭಾರತೀಯ ಭಾಷೆಯಲ್ಲೂ ಬ್ಯಾಂಕಿಂಗ್ ಕುರಿತ ಇಂಥ ಒಂದು ಪತ್ರಿಕೆ ಇಲ್ಲವೆಂಬುದು ನಮ್ಮ ಅಭಿಮಾನಕ್ಕೆ ಒಂದು ಮುಖ್ಯ ಕಾರಣ. ಕನ್ನಡಿಗರ 'ಅಭಿಮಾನ' ಎಂಥದು ಎಂಬುದು ಎಲ್ಲರಿಗೂ ಗೊತ್ತಿರುವಾಗ, ಇದು ಮೂರು ವರ್ಷಗಳನ್ನು ಕ್ರಮಿಸಿ ಮುನ್ನಡೆಯುತ್ತಿದೆಯೆಂಬುದು ನಮ್ಮ ಅಭಿಮಾನವನ್ನು ಇಮ್ಮಡಿಗೊಳಿಸುತ್ತದೆ. ಸರಕಾರದ, ಬ್ಯಾಂಕಿಂಗ್ ಸಂಸ್ಥೆಗಳ, ಪ್ರತಿಷ್ಠಿತರೆನಿಸಿಕೊಂಡವರ ಯಾವ ಬಗೆಯ ಪ್ರೋತ್ಸಾಹವೂ ಇಲ್ಲದಿದ್ದರೂ, ಕನ್ನಡ ಹಾಗೂ ಬ್ಯಾಂಕಿಂಗ್‌ನಲ್ಲಿ ಆಸಕ್ತಿಯುಳ್ಳ ಕೆಲವೇ ಮಂದಿ ಉತ್ಸಾಹಿಗಳ ಬಲ ಹಾಗೂ ಬೆಂಬಲದಿಂದ ಇದು ಇಷ್ಟರಮಟ್ಟಿಗೆ ನಡೆದು ಬರುತ್ತಿದೆಯೆಂಬುದು ಸೋಜಿಗವೆನಿಸಬಹುದು. ಇಂಥ ಯಾವುದೇ ಕೆಲಸಕ್ಕೆ ಮುಂದೆ ಬರುವವರೂ, ಅದರ ಹಿಂದೆ ನಿಂತು ಪ್ರೋತ್ಸಾಹ ನೀಡುವವರೂ ಯಾವಾಗಲೂ ಬಲು ಕಡಿಮೆಯೇ. ಆದರೆ ಇದರಲ್ಲಿ ಸಂಖ್ಯೆ ಮುಖ್ಯವಲ್ಲ, ಸತ್ತ್ವ ಮುಖ್ಯ. ಈ ನಂಬಿಕೆಯಿಂದಲೇ ನಾವು ಮುಂದುವರಿಯುತ್ತಿದ್ದೇವೆ.

ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧಿ ವಿಚಾರಗಳನ್ನು ಕುರಿತು ಕನ್ನಡದಲ್ಲಿ ಆಲೋಚಿಸಬಲ್ಲ, ಕನ್ನಡದಲ್ಲಿ ಬರೆಯಬಲ್ಲ, ಮಾತಾಡಬಲ್ಲ ತರುಣರ ತಂಡವನ್ನು ಈ ಪತ್ರಿಕೆ ನಿರ್ಮಿಸುತ್ತಿದೆಯೆಂಬುದು ನಮಗೆ ಹೆಮ್ಮೆಯ ಸಂಗತಿ. ಆರಂಭದಿಂದಲೂ ಈ ಪತ್ರಿಕೆ ದೊಡ್ಡದೊಡ್ಡ ಹೆಸರುಗಳ ಬೆನ್ನಟ್ಟಿ ಹೋದದ್ದಿಲ್ಲ. ಇದಕ್ಕಾಗಿ ದುಡಿಯುತ್ತಿರುವವರಲ್ಲೇ ಸುಪ್ತವಾಗಿರುವ ಶಕ್ತಿಯನ್ನು ಗುರುತಿಸಿ ಅದನ್ನು ಹೊರಗೆಳೆದು ನಿಶ್ಚಿತ ದಿಕ್ಕುಗಳಲ್ಲಿ ಹರಿಯುವ ಹಾಗೆ ಮಾಡುವುದರಲ್ಲಿ ಪತ್ರಿಕೆ ಯಶಸ್ವಿಯಾಗುತ್ತಿದೆ. ಇದೊಂದು ದೊಡ್ಡ ಸಾಧನೆಯೆಂದೇ ನಮ್ಮ ಅನಿಸಿಕೆ.

## ಬ್ಯಾಂಕಿಂಗ್ ಕನ್ನಡ ಕಮ್ಮಟ

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ ಈ ನಿಟ್ಟಿನಲ್ಲಿ ಈಚೆಗೆ ಒಂದು ದೊಡ್ಡ ಹೆಜ್ಜೆ ಇಟ್ಟಿದೆ. ಹಣ, ಬ್ಯಾಂಕಿಂಗ್ ಮುಂತಾದ ವಿಚಾರಗಳನ್ನು ಕುರಿತು ಬರೆಯುವವರ ತರಬೇತಿಗಾಗಿ ಕಮ್ಮಟಗಳನ್ನು ನಡಸುತ್ತಿದೆ. ಕಳೆದ ವರ್ಷ ಇಂಥ ಎರಡು ಕಮ್ಮಟಗಳನ್ನು ಅನುಕ್ರಮವಾಗಿ ಮೈಸೂರು ಮತ್ತು ಶಿವನಸಮುದ್ರಗಳಲ್ಲಿ ಯಶಸ್ವಿಯಾಗಿ ನಡಸಿದೆ. ಮೂರನೆಯ ಕಮ್ಮಟ ಈ ಏಪ್ರಿಲ್ ತಿಂಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಶಿರಸಿಯಲ್ಲಿ ನಡೆಯುತ್ತಿದೆ. ಮೊದಲ ಎರಡು ಕಮ್ಮಟಗಳಲ್ಲಿ ವಿವಿಧ ಬ್ಯಾಂಕುಗಳ ಸುಮಾರು ಹದಿನೈದು ಮಂದಿ ಭಾಗವಹಿಸಿದ್ದರು. ಮೊದಲನೆಯ ಕಮ್ಮಟದ ಅವಧಿ ನಾಲ್ಕು ದಿನ ; ಎರಡನೆಯದರದು ಆರು ದಿನ. ಭಾಗಿಗಳು ಕಮ್ಮಟದಲ್ಲಿ ತಾವು ರಚಿಸಿದ ಪ್ರಬಂಧಗಳನ್ನು ಮಂಡಿಸಿದರು. ಹಣ ಬ್ಯಾಂಕಿಂಗ್ ವಿಚಾರಗಳನ್ನು ಕುರಿತ ಇಂಗ್ಲಿಷ್ ಲೇಖನಗಳನ್ನು ಅನುವಾದಿಸಿದರು. ಈ ಪ್ರಬಂಧಗಳನ್ನು ಹಾಗೂ ಅನುವಾದಗಳನ್ನು ಉತ್ತಮಪಡಿಸುವ ಬಗ್ಗೆ ಭಾಗಿಗಳು ಚರ್ಚೆ ನಡೆಸಿದರು. ಇದು ಸಾಮೂಹಿಕ ಚಿಂತನೆ ಹಾಗೂ ಅಭಿವ್ಯಕ್ತಿಯಲ್ಲಿ ಒಂದು ಸಾರ್ಥಕ ಪ್ರಯೋಗ. ಯಾವುದೇ ವಿಷಯವನ್ನಾದರೂ ಅರ್ಥವಾಗುವ ರೀತಿಯಲ್ಲಿ ಕನ್ನಡದಲ್ಲಿ ಹೇಳುವುದು ಸಾಧ್ಯ ಎಂಬ ಆತ್ಮ

ವಿಶ್ವಾಸ ಮೂಡಿಸಿದ ಈ ಕಮ್ಮಟಗಳಲ್ಲಿ ಕೆಲವರಾದರೂ ಸಮರ್ಥ ಲೇಖಕರು ಸೃಷ್ಟಿಯಾಗಿದ್ದಾರೆಂದು ನಮ್ಮ ಅನಿಸಿಕೆ. ಪಾರಿಭಾಷಿಕ ಪದಗಳ ಸೃಷ್ಟಿ, ಬ್ಯಾಂಕುಗಳಲ್ಲಿ ಬಳಸಲಾಗುವ ಹಲವಾರು ನಮೂನೆಗಳ ಕನ್ನಡೀಕರಣ ಇವುಗಳ ವಿಚಾರವಾಗಿಯೂ ಉಪಯುಕ್ತವಾದ ಚರ್ಚೆಗಳು ನಡೆದುವು ; ಕೆಲವು ಸೂತ್ರಗಳನ್ನು ರೂಪಿಸಲಾಯಿತು. ಈ ಕಮ್ಮಟಗಳಿಂದ 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಸಂದಿರುವ ದೊಡ್ಡ ಲಾಭವೆಂದರೆ ಉಪಯುಕ್ತವಾದ ಕೆಲವು ಸ್ವತಂತ್ರ ಹಾಗೂ ಅನುವಾದಿತ ಲೇಖನಗಳ ಪ್ರಾಪ್ತಿ. ಎರಡನೆಯ ಕಮ್ಮಟದಲ್ಲಿ ಮಂಡಿಸಲಾದ ಕೆಲವು ಪ್ರಬಂಧಗಳನ್ನೂ ಅನುವಾದಗಳನ್ನೂ ಈ ಸಂಚಿಕೆಯಲ್ಲಿ ಕೊಡಲಾಗಿದೆ. ಇವುಗಳಿಂದ ನಮ್ಮ ಓದುಗರಿಗೆ ತುಂಬ ಪ್ರಯೋಜನವಾದೀತೆಂದು ಬಗೆದಿದ್ದೇವೆ. ಬ್ಯಾಂಕುಗಳಲ್ಲಿ ಬಳಸಲಾಗುವ ಕೆಲವು ನಮೂನೆಗಳ ಕನ್ನಡ ರೂಪಗಳನ್ನು ಪ್ರತ್ಯೇಕವಾಗಿ ಕೊಡಲಾಗುತ್ತದೆ. ಕನ್ನಡ ನಮ್ಮ ರಾಜ್ಯದ ಅಧಿಕೃತ ಭಾಷೆಯಾಗಿರುವ ಈ ಸುಮುಹೂರ್ತದಲ್ಲಿ ಈ ಕನ್ನಡ ನಮೂನೆಗಳು ಕರ್ನಾಟಕದ ಎಲ್ಲ ಬ್ಯಾಂಕುಗಳಲ್ಲೂ ಬಳಕೆಗೆ ಬರುತ್ತವೆಂದು ಹಾರೈಸುತ್ತೇವೆ. 'ಬ್ಯಾಂಕಿಂಗ್ ಪ್ರಪಂಚ'ದ ಸಂಚಿಕೆಗಳಲ್ಲಿ ಪ್ರಕಟವಾಗುತ್ತಿರುವ 'ಪಾರಿಭಾಷಿಕ ಪದಕೋಶ'ವೂ ಬ್ಯಾಂಕಿಂಗಿನಲ್ಲಿ ಆಸಕ್ತರಾದವರಿಗೆಲ್ಲ ಉಪಯುಕ್ತವಾಗುವುದೆಂದು ನಮ್ಮ ನಂಬಿಕೆ.

## ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘ

ಭಾರತೀಯ ಸ್ಟೇಟ್ ಬ್ಯಾಂಕ್ ಅನೇಕ ವಿಚಾರಗಳಲ್ಲಿ ವಿಕ್ರಮ ಸಾಧಿಸಿದೆ. ಅದು ಪ್ರಪಂಚದ ಅತ್ಯಂತ ದೊಡ್ಡ ವಾಣಿಜ್ಯ ಬ್ಯಾಂಕು. ಬ್ರಿಟಿಷರ ಕಾಲದಲ್ಲಿ 'ಇಂಪೀರಿಯಲ್ ಬ್ಯಾಂಕ್' ಎಂಬ ಹೆಸರಿನಿಂದ ಆರಂಭವಾಗಿ ಕೇಂದ್ರೀಯ ಬ್ಯಾಂಕಿನ ಅನೇಕ ಕಾರ್ಯಭಾರಗಳನ್ನು ನಿರ್ವಹಿಸುತ್ತಿದ್ದ ಈ ಬ್ಯಾಂಕು ರಿಸರ್ವ್ ಬ್ಯಾಂಕಿನ ಸ್ಥಾಪನೆಯೊಂದಿಗೆ ಈ ಕಾರ್ಯಭಾರಗಳನ್ನು ಬಿಟ್ಟುಕೊಟ್ಟಿತಾದರೂ ಭಾರತದ ವಾಣಿಜ್ಯ ಬ್ಯಾಂಕುಗಳ ಮುಂದಾಳುತನವನ್ನು ಬೆಳೆಸಿಕೊಂಡೇ ಬಂತು. ವಿದೇಶೀಯರ ಹತೋಟಿಯಲ್ಲಿದ್ದ ಈ ಬ್ಯಾಂಕಿನ ಭಾರತೀಕರಣವಾಗಬೇಕೆಂಬ ಕೂಗು ಇದ್ದೇ ಇತ್ತು. ಸ್ವತಂತ್ರ ಭಾರತದಲ್ಲಿ ಇದು ಅಪ್ಪಟ ಭಾರತೀಯವಾಯಿತು. ಸಾಮ್ರಾಜ್ಯಶಾಹಿಯ ದ್ಯೋತಕವಾದ ಹಳೆಯ ಹೆಸರನ್ನೂ ಕಳೆದುಕೊಂಡು ಭಾರತೀಯ ಸ್ಟೇಟ್ ಬ್ಯಾಂಕ್ ಆಯಿತು. ಹಲವು ರಾಜ್ಯಗಳ ಸರಕಾರಗಳ ಬ್ಯಾಂಕುಗಳನ್ನೂ ಒಡನಾಡಿಗಳಾಗಿ ಸೇರಿಸಿಕೊಂಡು ಪ್ರಭಾವ ಗಳಿಸಿಕೊಂಡಿತು. ಇಂದು ಹಲವು ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣಗೊಂಡಿವೆಯಾದರೂ ಭಾರತೀಯ ಸ್ಟೇಟ್ ಬ್ಯಾಂಕಿನ ಹಿರಿತನ ಬೆಳೆಯುತ್ತಲೇ ಇದೆ. ದೇಶದ ಆರ್ಥಿಕಾಭಿವೃದ್ಧಿ ಹಾಗೂ ಕಲ್ಯಾಣ ಸಾಧನೆಯಲ್ಲಿ ಅದರ ಪಾತ್ರ ಬಲು ದೊಡ್ಡದು.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಭಾರತೀಯ ಸ್ಟೇಟ್ ಬ್ಯಾಂಕಿನ ಉದ್ಯೋಗಿಗಳು ಒಂದು ಪವಾಡವನ್ನೇ ಮಾಡಿದ್ದಾರೆ. ಈ ಬ್ಯಾಂಕಿನ ಬೆಂಗಳೂರು ನಗರ ಶಾಖೆಯ ಕನ್ನಡಿಗರು ಹತ್ತು ವರ್ಷಗಳ ಹಿಂದೆ ಒಂದು ಕನ್ನಡ ಸಂಘ ಸ್ಥಾಪಿಸಿಕೊಂಡರು. 'ಹಚ್ಚೇವು ಕನ್ನಡದ ದೀಪ' ಎಂಬುದು ಅವರ ಧ್ಯೇಯ. ಅವರು ಅಂದು ಹಚ್ಚಿದ ದೀಪ ಇಂದು ಜ್ವಾಜ್ವಲ್ಯಮಾನವಾಗಿದೆ. ಬ್ಯಾಂಕಿನ ಹಲವು ಶಾಖೆಗಳಲ್ಲಿ ಕನ್ನಡ ಸಂಘಗಳ ಸ್ಥಾಪನೆಯಾಗಿದೆ. ಈ ಕನ್ನಡ ಸಂಘಗಳೆಲ್ಲ ಸೇರಿ 'ಸಮನ್ವಯ ಸಮಿತಿ'ಯನ್ನು ರಚಿಸಿಕೊಂಡು ಸಂಘಟಿತವಾಗಿವೆ. 'ಬ್ಯಾಂಕಿಂಗ್ ಪ್ರಪಂಚ'ದಂಥ ಪತ್ರಿಕೆಯನ್ನು ಪ್ರಕಟಿಸಲು ಸಾಧ್ಯವಾಗಿರುವುದು ಈ ಸಂಘಟನೆಯ ಫಲ. ಇಂದು ಇತರ ಬ್ಯಾಂಕುಗಳ ಶಾಖೆಗಳಲ್ಲೂ ಕನ್ನಡ ಸಂಘಗಳ ಸ್ಥಾಪನೆಯಾಗಿರುವುದು ತುಂಬಾ ಸಂತೋಷ ಸಂಗತಿ. ಭಾರತೀಯ ಸ್ಟೇಟ್ ಬ್ಯಾಂಕ್ ಈ ನಿಟ್ಟಿನಲ್ಲೂ ಇತರ ಬ್ಯಾಂಕುಗಳಿಗೆ ಮಾರ್ಗದರ್ಶನ ನೀಡಿದೆಯೆನ್ನಬೇಕು. ಇದಕ್ಕಾಗಿ ಗೌರವ ಸಲ್ಲಬೇಕಾದ್ದು ಭಾರತೀಯ ಸ್ಟೇಟ್ ಬ್ಯಾಂಕಿನ ಉತ್ಸಾಹಿ ಕನ್ನಡಿಗರಿಗೆ.

## ದಶಮಾನೋತ್ಸವ

ಭಾರತೀಯ ಸ್ಟೇಟ್ ಬ್ಯಾಂಕಿನ ಬೆಂಗಳೂರು ನಗರ ಶಾಖೆ ಕಳೆದ ಡಿಸೆಂಬರ್ 9ರಿಂದ 12ರ ವರೆಗೆ ದಶಮಾನೋತ್ಸವ ಆಚರಿಸಿತು. ಈ ಸಂಬಂಧವಾಗಿ ಏರ್ಪಡಿಸಿದ್ದ ಉಪನ್ಯಾಸಗಳ ಹಾಗೂ ಮನೋರಂಜನೆಯ ಕಾರ್ಯಕ್ರಮಗಳ ಜೊತೆಗೆ ಪುಸ್ತಕ ಪ್ರಕಟನೆ, ವಿಚಾರ ಸಂಕಿರಣ ಮುಂತಾದವನ್ನೂ ಇಟ್ಟುಕೊಂಡಿದ್ದುದು ಒಂದು ವೈಶಿಷ್ಟ್ಯ. ಬ್ಯಾಂಕಿಂಗ್ ಕುರಿತ ಹತ್ತು ವಿಭಿನ್ನ ವಿಷಯಗಳ ಮೇಲೆ ಹತ್ತು ಮಂದಿ ತಜ್ಞರು ದಶಮಾನೋತ್ಸವ ವರ್ಷದಲ್ಲಿ ರಾಜ್ಯದ ವಿವಿಧ ಸ್ಥಳಗಳಲ್ಲಿ ಕನ್ನಡ ಸಂಘದ ಆಶ್ರಯದಲ್ಲಿ ನೀಡಿದ ಭಾಷಣಗಳ ಸಂಕಲನವೇ 'ಕನ್ನಡದಲ್ಲಿ ಬ್ಯಾಂಕಿಂಗ್' ಎಂಬ ಪುಸ್ತಕವಾಗಿ ಪ್ರಕಟವಾಗಿದೆ. ಕನಾಟಕದಲ್ಲಿ ಬ್ಯಾಂಕಿಂಗ್ ವ್ಯವಹಾರ ಕನ್ನಡದಲ್ಲೇ ಏಕೆ ನಡೆಯಬೇಕು ಎಂಬುದರ ವಿವೇಚನೆ ಇಲ್ಲಿದೆ. ಮಾತ್ರವಲ್ಲ, ಬ್ಯಾಂಕಿಂಗ್ ಕುರಿತ ಯಾವ ವಿಚಾರವನ್ನೇ ಆಗಲಿ ಕನ್ನಡದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸುವುದು ಸಾಧ್ಯ ಎಂಬುದಕ್ಕೆ ಈ ಪುಸ್ತಕ ಸಾಕ್ಷಿಯಾಗಿದೆ. ಅಂತೆಯೇ, 'ಕರ್ನಾಟದಲ್ಲಿ ಬ್ಯಾಂಕಿಂಗ್ ಇನ್ನೂ ಸಾಕಷ್ಟು ಇಲ್ಲ' ಎಂಬ ವಿಷಯವನ್ನು ಕುರಿತು ಬ್ಯಾಂಕಿಂಗ್ ಕ್ಷೇತ್ರದ ನಾಲ್ವರು ಪರಿಣತರು ನಡೆಸಿಕೊಟ್ಟ ವಿಚಾರ ಸಂಕಿರಣವೂ ತುಂಬ ಉನ್ನತಮಟ್ಟದ್ದಾಗಿತ್ತು. ಈ ಸಂಕಿರಣದಲ್ಲಿ ಮಾಡಲಾದ ಭಾಷಣಗಳು ಪುಸ್ತಕ ರೂಪದಲ್ಲಿ ಬೇಗ ಹೊರಬರಲೆಂಬುದು ನಮ್ಮ ಆಶಯ.

## ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತು

'ದಶಮಾನೋತ್ಸವ ಸಂದರ್ಭದಲ್ಲಿ ಏರ್ಪಡಿಸಿದ್ದ ಇನ್ನೊಂದು ಕಾರ್ಯಕ್ರಮವೂ ಗಮನಾರ್ಹ. ವಿವಿಧ ಬ್ಯಾಂಕುಗಳ ಕನ್ನಡ ಸಂಘಗಳ ಪ್ರತಿನಿಧಿಗಳ ಸಭೆ ಅದು. ಬ್ಯಾಂಕಿಂಗ್ ಹಾಗೂ ಕನ್ನಡಕ್ಕೆ ಸಂಬಂಧಿಸಿದ ನಾನಾ ಸಮಸ್ಯೆಗಳನ್ನು ಕುರಿತ ಚರ್ಚೆ ನಡೆಸಿ ಮುಂದಿನ ದಾರಿಯೇನೆಂಬುದನ್ನು ಕಂಡುಕೊಳ್ಳುವುದು ಈ ಸಭೆಯ ಉದ್ದೇಶ. ಅಖಿಲ ಕರ್ನಾಟಕ ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತೊಂದನ್ನು ಸ್ಥಾಪಿಸಬೇಕೆಂಬುದು ಇದರ ಮುಖ್ಯ ತೀರ್ಮಾನ. ಅಂತೆಯೇ ಇದರ ರೂಪರೇಷೆ ಇದೀಗ ಸಿದ್ಧವಾಗಿದೆ. ಎಲ್ಲ ಬ್ಯಾಂಕುಗಳ ಕನ್ನಡ ಸಂಘಗಳನ್ನು ಪ್ರತಿನಿಧಿಸುವ ಇಂಥ ಸಂಸ್ಥೆಯೊಂದು ಜನ್ಮ ತಳೆದಾಗ ಕರ್ನಾಟಕದಲ್ಲಿ ಬ್ಯಾಂಕಿಂಗಿನ, ಬ್ಯಾಂಕುಗಳಲ್ಲಿ ಕನ್ನಡದ ಹಾಗೂ ಕನ್ನಡಿಗರ ಹಿತರಕ್ಷಣೆಯ ಹಾದಿಯಲ್ಲಿ ಅದೊಂದು ಪ್ರಮುಖ ಹೆಜ್ಜೆಯಾದೀತೆಂಬುದರಲ್ಲಿ ಸಂದೇಹವಿಲ್ಲ.

## ಸ್ಟೇಟ್ ಬ್ಯಾಂಕ್ ಕರ್ನಾಟಕ ವೃತ್ತ

ಭಾರತೀಯ ಸ್ಟೇಟ್ ಬ್ಯಾಂಕಿನ ಬೆಂಗಳೂರು ನಗರ ಶಾಖೆಯ ದಶಮಾನೋತ್ಸವದ ನೆನಪು ಇನ್ನೂ ಹಸುರಾಗಿರುವಾಗಲೇ ಸಂತಸದ ಸುದ್ದಿಯೊಂದು ಬಂದಿದೆ. ಕರ್ನಾಟಕ ರಾಜ್ಯಕ್ಕೆ ಪ್ರತ್ಯೇಕವಾಗಿ ಈ ಬ್ಯಾಂಕಿನ ವೃತ್ತವೊಂದನ್ನು ಸ್ಥಾಪಿಸಬೇಕೆಂದು ಸರ್ಕಾರ ತೀರ್ಮಾನಿಸಿದೆ. ಇದುವರೆಗೂ ಭಾರತೀಯ ಸ್ಟೇಟ್ ಬ್ಯಾಂಕಿನ ಕರ್ನಾಟಕದ ಶಾಖೆಗಳು ಮದ್ರಾಸಿನಲ್ಲಿರುವ ಸ್ಥಳೀಯ ಮುಖ್ಯ ಕಛೇರಿಯ ಅಧಿಕಾರವ್ಯಾಪ್ತಿಗೆ ಒಳಪಟ್ಟು ಕಾರ್ಯನಿರ್ವಹಿಸುತ್ತ ಬಂದಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಬೆಂಗಳೂರಿನಲ್ಲೊಂದು ಪ್ರಾದೇಶಿಕ ಕಛೇರಿ ಇರುವುದಾದರೂ, ಎಲ್ಲ ಪ್ರಮುಖ ವಿಚಾರಗಳಲ್ಲಿ ಇದು ಮದ್ರಾಸಿನ ಮುಖ್ಯ ಕಛೇರಿಗೆ ಅಧೀನವಾಗಿ ಕಾರ್ಯನಿರ್ವಹಿಸಬೇಕಾಗಿದೆ. ಇದರಿಂದಾಗಿ ತಿಳಿದೂ ತಿಳಿಯದೆಯೂ ಕರ್ನಾಟಕಕ್ಕೆ ಆಗಿರುವ ಅನ್ಯಾಯ ಅಷ್ಟಿಷ್ಟಲ್ಲ. ಠೇವಣಿ ಸಂಗ್ರಹಣೆಯಲ್ಲಿ ಕರ್ನಾಟಕ ರಾಜ್ಯ ಶಾಖೆಗಳು ಇತರ ಹಲವು ರಾಜ್ಯ ಶಾಖೆ

ಗಳಿಗಿಂತಲೂ ಮುಂದು. ಆದರೆ ಈ ಹಣದ ವಿನಿಯೋಗದ ವಿಚಾರದಲ್ಲಿ ಹಿಂದು. ಕರ್ನಾಟಕ ರಾಜ್ಯದಲ್ಲಿ ಈ ಬ್ಯಾಂಕಿನ ಶಾಖೆಗಳನ್ನು ತೆರೆಯುವ ವಿಚಾರದಲ್ಲೂ ಅಷ್ಟೆ. ಕೇವಲ ಕೆಲವು ವರ್ಷಗಳ ಹಿಂದೆ ಭಾರತೀಯ ಸ್ಟೇಟ್ ಬ್ಯಾಂಕಿನ ಕೆಲವೇ ಶಾಖೆಗಳನ್ನು ಹೊಂದಿದ್ದ ಅನೇಕ ರಾಜ್ಯಗಳಲ್ಲಿ ಇಂದು ಕರ್ನಾಟಕದಲ್ಲಿ ಇರುವುದಕ್ಕಿಂತ ಹೆಚ್ಚಿನ ಸಂಖ್ಯೆಯ ಶಾಖೆಗಳಿವೆ. ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ಶಾಖೆಗಳಿಲ್ಲವಾದ್ದರಿಂದ ಇದಕ್ಕೆ ಪ್ರತ್ಯೇಕ ಸ್ಥಳೀಯ ಮುಖ್ಯ ಕಛೇರಿಯ ಅಗತ್ಯವಿಲ್ಲವೆಂಬ ವಾದವನ್ನು ಮುಂದಿಡಲಾಗುತ್ತಿತ್ತು. ಆದರೆ ಇದಕ್ಕಿಂತ ಕಡಿಮೆ ಸಂಖ್ಯೆಯ ಶಾಖೆಗಳಿದ್ದ ರಾಜ್ಯಗಳಲ್ಲಿ ಸ್ಥಳೀಯ ಮುಖ್ಯ ಕಛೇರಿಗಳನ್ನು ಸ್ಥಾಪಿಸಲಾಗಿಲ್ಲವೆ ?—ಎಂಬ ಪ್ರಶ್ನೆಗೂ ಉತ್ತರವಿತ್ತು. ಆ ರಾಜ್ಯಗಳಲ್ಲಿ ಹಿಂದೆಯೇ ಅವನ್ನು ಕೊಟ್ಟಾಗಿಬಿಟ್ಟಿದೆ ; ಈಗೇನೂ ಮಾಡಲಾಗುವುದಿಲ್ಲ, ಎಂಬುದು ಆ ಉತ್ತರ. ಕರ್ನಾಟಕದಲ್ಲೇ ಹುಟ್ಟಿ ಬೆಳೆದ ಅನೇಕ ಬ್ಯಾಂಕಿಂಗ್ ಸಂಸ್ಥೆಗಳಿರುವುದರಿಂದ, ಈ ವಿಚಾರದಲ್ಲಿ ಈ ರಾಜ್ಯ ಸಾಕಷ್ಟು ಮುಂದುವರಿದಿರುವುದರಿಂದ ರಾಜ್ಯದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಶಾಖೆಗಳನ್ನು ವಿಸ್ತರಿಸುವ ಪ್ರಶ್ನೆಯಾಗಲಿ, ಪ್ರತ್ಯೇಕ ವೃತ್ತರಚನೆಯ ಪ್ರಶ್ನೆಯಾಗಲಿ ಉದ್ಭವಿಸುವುದಿಲ್ಲವೆಂದೂ ಹೇಳಲಾಗುತ್ತಿತ್ತು. ಆದರೆ ಇದೇ ರೀತಿ ಇನ್ನೂ ಕೆಲವು ರಾಜ್ಯಗಳಲ್ಲೂ ಬ್ಯಾಂಕಿಂಗ್ ಸಂಸ್ಥೆಗಳು ಉದಿಸಿ ಪ್ರವರ್ಧಮಾನಕ್ಕೆ ಬಂದಿಲ್ಲವೆ ? ಅಲ್ಲೇಕೆ ಪ್ರತ್ಯೇಕ ವೃತ್ತ ಪ್ರಾರಂಭಿಸಲಾಗಿದೆ.? ಎಂಬ ಪ್ರಶ್ನೆಗೆ ಉತ್ತರ ಇರಲಿಲ್ಲ. ಭಾರತೀಯ ಸ್ಟೇಟ್ ಬ್ಯಾಂಕ್ ನಮ್ಮ ದೇಶದ ಹಿರಿಯ ಬ್ಯಾಂಕಿಂಗ್ ಸಂಸ್ಥೆ. ಅದರ ಪ್ರಭಾವವೂ ಬಂಡವಾಳ ಸಾಮರ್ಥ್ಯವೂ ಅಗಾಧ. ಈ ದೃಷ್ಟಿಯಿಂದ ಇತರ ಬ್ಯಾಂಕುಗಳು ಅದರ ಸಮಕ್ಕೆ ಬರಲಾರವು. ಭಾರತೀಯ ಸ್ಟೇಟ್ ಬ್ಯಾಂಕೇ ನಿರ್ವಹಿಸಬೇಕಾಗಿರುವ ಕೆಲವು ಕ್ಷೇತ್ರಗಳುಂಟು. ಆದ್ದರಿಂದ ಭಾರತೀಯ ಸ್ಟೇಟ್ ಬ್ಯಾಂಕಿನ ವಿಸ್ತರಣೆ, ರಾಜ್ಯಕ್ಕೆ ಅದರ ಪ್ರತ್ಯೇಕವಾದ ಮುಖ್ಯ ಕಛೇರಿ ಅಗತ್ಯವೆನಿಸಿತ್ತು.

ಇವೆಲ್ಲಕ್ಕೂ ಸರಿಜೋಡಿಯಾಗಿ ಇನ್ನೊಂದು ಸಮಸ್ಯೆಯನ್ನೂ ಇಲ್ಲಿ ಹೇಳಬೇಕಾದ್ದು ಅಗತ್ಯ. ಮದರಾಸು ವೃತ್ತಕ್ಕೆ ಸೇರಿದ್ದರಿಂದಾಗಿ ಕರ್ನಾಟಕದ ಯುವಕರಿಗೆ ಈ ಬ್ಯಾಂಕಿನಲ್ಲಿ ಸಾಕಷ್ಟು ಉದ್ಯೋಗ ದೊರಕುತ್ತಿಲ್ಲವೆಂಬುದು ಆ ಸಮಸ್ಯೆ. ಭಾರತೀಯ ಸ್ಟೇಟ್ ಬ್ಯಾಂಕ್ ಅಖಿಲ ಭಾರತ ಸಂಸ್ಥೆಯೆಂಬುದು ನಿಜ. ಆದರೆ ಅದರಲ್ಲಿ ಇತರ ರಾಜ್ಯಗಳವರಂತೆ ಕರ್ನಾಟಕದವರಿಗೂ ನ್ಯಾಯವಾದ ಪ್ರಮಾಣದಲ್ಲಿ ಉದ್ಯೋಗಗಳು ದೊರಕಬೇಕೆಂದು ನಿರೀಕ್ಷಿಸುವುದರಲ್ಲಿ ತಪ್ಪೇನೂ ಇರಲಾರದು ; ಇದು ದುರಭಿಮಾನವೆಂದು ಯಾರೂ ಭಾವಿಸಬಾರದು. ಕರ್ನಾಟಕದ ಗ್ರಾಹಕರಿಗೂ ಅನೇಕ ವೇಳೆ ಅನ್ಯಾಯಗಳಾಗಿವೆ. ಅಚ್ಚ ಕನ್ನಡಿಗರೇ ಅತ್ಯಧಿಕ ಸಂಖ್ಯೆಯಲ್ಲಿರುವ ಪ್ರದೇಶವೊಂದರ ಬ್ಯಾಂಕ್ ಶಾಖೆಗೆ ತಮಿಳಿನ ಜಮಾಪಟ್ಟಿ ಮತ್ತು ಇತರ ನಮೂನೆಗಳನ್ನು ಸರಬರಾಜು ಮಾಡಿದ ಪ್ರಸಂಗಗಳೂ ಉಂಟು. ಕರ್ನಾಟಕದಲ್ಲಿಯು ಜನ ಯಾವ ಭಾಷೆ ಆಡುತ್ತಾರೋ ಆ ಭಾಷೆಯಲ್ಲೇ ಅವರೊಂದಿಗೆ ವ್ಯವಹಾರ ನಡೆಯುವುದಾದರೆ ಮಾತ್ರ ಬ್ಯಾಂಕಿಂಗ್ ವ್ಯವಹಾರ ಸಾರ್ಥಕವಾಗಬಲ್ಲುದು. ಕರ್ನಾಟಕಕ್ಕೆ ಪ್ರತ್ಯೇಕ ವೃತ್ತ ಇಲ್ಲದಿದ್ದುದರಿಂದಲೇ ಹೀಗೆಲ್ಲಾ ಆಗುತ್ತಿದೆಯೆಂಬ ಅಸಮಾಧಾನ ನಿರಾಧಾರವೆಂದು ತಳ್ಳಿಹಾಕಲಾಗುವುದಿಲ್ಲ. ಕರ್ನಾಟಕಕ್ಕೇ ಪ್ರತ್ಯೇಕವಾದ ವೃತ್ತದ ನಿರ್ಮಾಣದಿಂದ ಇಂಥ ಪರಿಸ್ಥಿತಿಯ ನಿವಾರಣೆ ಆಗಬಹುದೆಂದು ಹೇಳಬಹುದು. ಈ ವೃತ್ತ ರಚನೆಗಾಗಿ ಕಳೆದ ಹಲವು ವರ್ಷಗಳಿಂದ ನಡೆಸಿದ ಪ್ರಯತ್ನ ಕೊನೆಗೂ ಫಲಿಸಿರುವುದು ನೆಮ್ಮದಿಯ ಸಂಗತಿ. ಇದಕ್ಕಾಗಿ ಬ್ಯಾಂಕ್ ಉದ್ಯೋಗಿಗಳೂ ಸಾರ್ವಜನಿಕರೂ ಶಾಸಕರೂ ಪತ್ರಿಕೆಗಳವರೂ ಬಹಳವಾಗಿ ಶ್ರಮಿಸಿದ್ದಾರೆ. ಇದಕ್ಕಾಗಿ ದುಡಿದವರನ್ನೆಲ್ಲ ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಯುವುದೂ ಅವರಿಗೆ ಧನ್ಯವಾದ ಹೇಳುವುದೂ ಬ್ಯಾಂಕಿಂಗಿನಲ್ಲಿ ಆಸಕ್ತರಾದವರೆಲ್ಲರ ಕರ್ತವ್ಯ.

**ದರೋಡೆ**

ಭಾರತೀಯ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿಯ ಈ ಹೊಸ ಬೆಳವಣಿಗೆಯನ್ನು ಕುರಿತು ಸಂತೋಷ ವ್ಯಕ್ತಪಡಿಸುತ್ತಿರುವಾಗಲೇ ಆತಂಕಕಾರಿಯಾದ ಪ್ರವೃತ್ತಿಯೊಂದನ್ನೂ ಇಲ್ಲಿ ವಿಷಾದದಿಂದ ಗುರುತಿಸಬೇಕಾಗಿದೆ. ಅದು ಬ್ಯಾಂಕುಗಳ ದರೋಡೆ ಹಾಗೂ ಅವುಗಳಲ್ಲಿ ನಡೆಯುತ್ತಿರುವ ವಂಚನೆಯ ಪ್ರಕರಣಗಳಿಗೆ ಸಂಬಂಧಿಸಿದ್ದು. ಭಾರತದ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣದ ಅನಂತರದ ಕಾಲದಲ್ಲಿ ಬ್ಯಾಂಕು ಶಾಖೆಗಳ ಸಂಖ್ಯೆ ತೀವ್ರವಾಗಿ ಏರುತ್ತಿದೆ. ಇದು ಸ್ವಾಗತಾರ್ಹವೇ. ಭಾರತದಂಥ ವಿಶಾಲವಾದ ದೇಶದಲ್ಲಿ ಸಾಕಷ್ಟು ಬ್ಯಾಂಕಿಂಗ್ ಸೌಲಭ್ಯ ಇನ್ನೂ ನಿರ್ಮಾಣವಾಗಿಲ್ಲ ವೆಂಬುದು ನಿಜವೇ. ಬ್ಯಾಂಕುಗಳ ರಾಷ್ಟ್ರೀಕರಣದ ಒಂದು ಮುಖ್ಯ ಉದ್ದೇಶವೆಂದರೆ ದೇಶದಲ್ಲಿ ಬ್ಯಾಂಕಿಂಗ್ ಕಛೇರಿಗಳ ವ್ಯಾಪಕ ಜಾಲವೊಂದನ್ನು ರಚಿಸುವುದೇ. ರಾಷ್ಟ್ರೀಕರಣದ ಸಮಯದಲ್ಲಿ ದೇಶದಲ್ಲಿದ್ದ ಒಟ್ಟು ಬ್ಯಾಂಕ್ ಶಾಖೆಗಳ ಸಂಖ್ಯೆ ಎಂಟು ಸಾವಿರ. ಇಂದು ಸರ್ಕಾರಿ ವಲಯದ 28 ಬ್ಯಾಂಕಿಂಗ್ ಸಂಸ್ಥೆಗಳ ಶಾಖೆಗಳು ಸುಮಾರು 40,000. ಭಾರತೀಯ ಸ್ಟೇಟ್ ಬ್ಯಾಂಕ್ ಒಂದರ ಶಾಖೆಗಳೇ 6,000ಕ್ಕಿಂತಲೂ ಅಧಿಕ. ಹದಿನಾಲ್ಕು ಬ್ಯಾಂಕುಗಳ ರಾಷ್ಟ್ರೀಕರಣವಾದಾಗ (1969) 30,000 ಮಂದಿ ಬ್ಯಾಂಕ್ ಉದ್ಯೋಗಿಗಳಿದ್ದರು. ಈಗ ಅವರ ಸಂಖ್ಯೆ 4.5 ಲಕ್ಷ. ಹೀಗೆ ಪರಿಮಾಣಾತ್ಮಕವಾಗಿ ಅಗಾಧ ಬೆಳವಣಿಗೆ ಆಗಿದ್ದಾಗ್ಯೂ ಗುಣಾತ್ಮಕವಾಗಿ ಎಷ್ಟರಮಟ್ಟಿನ ಸಾಧನೆ ಆಗಿದೆ ? ಈ ವಿಸ್ತರಣೆಗೆ ಅನುಗುಣವಾಗಿ ಆಡಳಿತ, ವ್ಯವಸ್ಥಾಪನೆ ಹಾಗೂ ಲೆಕ್ಕಪತ್ರ ವ್ಯವಸ್ಥೆಗಳನ್ನು ಎಷ್ಟರಮಟ್ಟಿಗೆ ಆಧುನೀಕರಿಸಿದ್ದೇವೆ ? ನಮ್ಮ ಬ್ಯಾಂಕಿಂಗ್ ವ್ಯವಸ್ಥೆ ಡಿನೋಸಾರಿನಂತಾಗಿದೆಯಲ್ಲವೆ ? ಸಕಾಲದಲ್ಲಿ ಇದನ್ನು ಹೆಚ್ಚು ದಕ್ಷವೂ ವೈಜ್ಞಾನಿಕವೂ ಆಗುವಂತೆ ಮಾಡದಿದ್ದರೆ ಅಪರಿಹಾರ್ಯವಾದ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆಯಲ್ಲವೆ ? ಇದು ತೀವ್ರವಾಗಿ ಗಮನಿಸಬೇಕಾದ ವಿಚಾರ.

ಪರಿಸ್ಥಿತಿ ಈಗಾಗಲೇ ಕೈಮೀರಿ ಹೋಗುತ್ತಿದೆಯೆಂಬುದಕ್ಕೆ ಬ್ಯಾಂಕು ಕಛೇರಿಗಳಲ್ಲಿ ನಡೆಯುತ್ತಿರುವ ದರೋಡೆಗಳನ್ನು ಹಾಗೂ ಹಣದ ಛಪಾವಣೆಯನ್ನು ನಿದರ್ಶನವಾಗಿ ನೀಡಬಹುದು. ಈ ಸಂಚಿಕೆಯಲ್ಲಿ ಬ್ಯಾಂಕ್ ದರೋಡೆಗಳನ್ನು ಕುರಿತ ಲೇಖನವೊಂದು ಪ್ರಕಟವಾಗಿದೆ. ನಮ್ಮ ಸಂಸತ್ತಿನಲ್ಲೂ ಇದರ ಪ್ರಸ್ತಾಪ ಬಂದಿತ್ತು. 1981ರಲ್ಲಿ ಸರ್ಕಾರಿ ವಲಯದ ಬ್ಯಾಂಕಿಂಗ್ ಕಛೇರಿಗಳ ದರೋಡೆಗಳ ಸಂಖ್ಯೆ 32 ಇದ್ದದ್ದು ಮರು ವರ್ಷ (1982) 71ಕ್ಕೆ ಏರಿತು. ಲೂಟಿಯಾದ ಹಣ ರೂ. 16.85 ಲಕ್ಷ. ಇದರೊಂದಿಗೇ ಹಣದ ಛಪಾವಣೆಯ ಪ್ರಕರಣಗಳೂ ಅಧಿಕವಾಗುತ್ತಿವೆ. ಕಳೆದ ವರ್ಷ ಇವುಗಳ ಸಂಖ್ಯೆ 1,574.

ದೇಶದಲ್ಲಿರುವ ಬ್ಯಾಂಕು ಶಾಖೆಗಳ ಸಂಖ್ಯೆಯನ್ನು ಗಮನಿಸಿದಾಗ ಒಂದು ವರ್ಷದಲ್ಲಿ ಎಪ್ಪತ್ತೊಂದು ದರೋಡೆಗಳು ಅಷ್ಟೇನೂ ಹೆಚ್ಚಲ್ಲ ಎಂದು ಸಮಾಧಾನ ತಂದುಕೊಳ್ಳಲು ಪ್ರಯತ್ನಿಸಬಹುದು. ಆದರೆ 'ಹಿಂದೂ' ಪತ್ರಿಕೆ ಬರೆದಿರುವ ಹಾಗೆ ಕೇವಲ ಕೆಲವೇ ಮಂದಿ ಸಾಹಸಿಗಳು, ಕೆಲವು ವೇಳೆ ಕೇವಲ ಇಬ್ಬರು ಮೂವರು, ಬ್ಯಾಂಕು ಸಿಬ್ಬಂದಿಯನ್ನು ಬೆದರಿಸಿ ಮಿಂಚಿನ ವೇಗದಲ್ಲಿ ಹಣವನ್ನು ಲಪಟಾಯಿಸಿ ಪರಾರಿಯಾಗುವುದರಿಂದ ಒಂದು ಅಂಶವಂತೂ ಸ್ಪಷ್ಟವಾಗುತ್ತದೆ. ನಮ್ಮ ಬ್ಯಾಂಕು ಕಛೇರಿಗಳಲ್ಲಿ ಭದ್ರತಾವ್ಯವಸ್ಥೆ ಎಷ್ಟು ಅಸಮರ್ಪಕವೆಂಬುದು ವೇದ್ಯವಾಗುತ್ತದೆ. ಪದೇಪದೇ ಲೂಟಿಗಳು ಸಂಭವಿಸುತ್ತಲೇ ಇವೆ. ಹೊಸಹೊಸ ಶಾಖೆಗಳನ್ನು ತೆರೆಯಬೇಕೆಂಬ ಆತುರದಲ್ಲಿ ಬ್ಯಾಂಕುಗಳು ಭದ್ರತೆಯ ಅಂಶವನ್ನು ಕಡೆಗಣಿಸುತ್ತಿವೆಯೆನಿಸುತ್ತದೆ. ಹೊಸ ಶಾಖೆಗಳನ್ನು ತೆರೆಯುವ ಮುನ್ನ ಭದ್ರತಾ ಕ್ರಮಗಳನ್ನು ತೆಗೆದುಕೊಳ್ಳದಿದ್ದರೆ, ಈ ಬಗ್ಗೆ ಸಾಕಷ್ಟು ಪುರಾವೆಗಳನ್ನೊದಗಿಸದಿದ್ದರೆ, ಅಂಥ ಶಾಖೆಗಳಿಗೆ ಅನುಮತಿ ನೀಡಬಾರದೆಂದು ಪಶ್ಚಿಮ ಬಂಗಾಳ ಸರ್ಕಾರ ತೀರ್ಮಾನಿಸಿದೆ. ಕಳೆದ ವರ್ಷದಿಂದ ಈ ನಿಯಮ

ಜಾರಿಗೆ ಬಂದಿದೆ. ಬ್ಯಾಂಕುಗಳಲ್ಲಿ ಮುಖ್ಯ ಸ್ಥಾನಗಳಲ್ಲಿರುವ ಉದ್ಯೋಗಿಗಳಿಗೆ ಪಿಸ್ತೂಲು ನೀಡಬೇಕು. ಎಲ್ಲ ಶಾಖೆಗಳಿಗೂ ಸಶಸ್ತ್ರ ಪಹರೆ ಒದಗಿಸಬೇಕು. ಹತ್ತಿರದ ಪೋಲೀಸ್ ಠಾಣೆ ಅಥವಾ ನಿಯಂತ್ರಣ ಕೊಟಡಿಗಳಿಗೆ ನೇರ ಸಂಪರ್ಕ ಸೌಲಭ್ಯ ಏರ್ಪಡಿಸಬೇಕು. ವಿದ್ಯುನ್ಮಾನ ಗಸ್ತು ವ್ಯವಸ್ಥೆ ಹಾಗೂ ಅಪಾಯದ ಕರೆ ನೀಡುವ ಸಾಧನಗಳನ್ನು ಸ್ಥಾಪಿಸಬೇಕು. ಬ್ಯಾಂಕು ಸಿಬ್ಬಂದಿಯಲ್ಲಿ ಭದ್ರತಾ ಮನೋಧರ್ಮ ಬೆಳೆಯುವಂತೆ ಮಾಡಬೇಕು. 'ಹಿಂದೂ' ಪತ್ರಿಕೆ ನೀಡಿರುವ ಈ ಸಲಹೆಗಳನ್ನು ಸರ್ಕಾರವೂ ಬ್ಯಾಂಕುಗಳೂ ಗಂಭೀರವಾಗಿ ಪರಿಶೀಲಿಸಿ ಆದಷ್ಟು ಬೇಗ ಜಾರಿಗೆ ತರುವುದು ಅತ್ಯವಶ್ಯ.

## ವಂಚನೆ

ಬ್ಯಾಂಕು ಶಾಖೆಗಳ ಅವ್ಯವಸ್ಥಿತ ವಿಸ್ತರಣೆ, ಅಸಮರ್ಪಕ ನಿರ್ವಹಣ ಹಾಗೂ ನಿಯಂತ್ರಣ, ಹಳೆಯ ಲೆಕ್ಕಬರಹ ವ್ಯವಸ್ಥೆ, ಅದಕ್ಷ ಸಿಬ್ಬಂದಿ ಮುಂತಾದ ಕಾರಣಗಳಿಂದಾಗಿ ಬ್ಯಾಂಕುಗಳಲ್ಲಿ ವಂಚನೆಯ ಪ್ರಕರಣಗಳೂ ಹೆಚ್ಚುತ್ತಿವೆ. ಗುಜರಾತ್ ರಾಜ್ಯದ ಗಾಂಧೀನಗರದಲ್ಲಿ ಪ್ರಮುಖ ಬ್ಯಾಂಕೊಂದರ ಶಾಖೆಯಲ್ಲಿ ಸುಮಾರು ರೂ. 3.5 ಕೋಟಿಯ ಭಾರಿ ವಂಚನೆಯ ಪ್ರಕರಣವೊಂದು ಪತ್ತೆಯಾಗಿದೆ. ಕಳೆದ ನಾಲ್ಕು ವರ್ಷಗಳಿಂದ ಅಲ್ಲಿಯ ಗುಮಾಸ್ತೆಯೊಬ್ಬ ಲೆಕ್ಕಗಳಲ್ಲಿ ಕೈವಾಡ ನಡೆಸಿ ಇಷ್ಟೊಂದು ಅಗಾಧ ಮೊತ್ತದ ಹಣದ ಛಪಾವಣೆ ಮಾಡಿದನೆಂಬುದು ಆಶ್ಚರ್ಯಕರ. ಭಾರತದ ವಾಣಿಜ್ಯ ಬ್ಯಾಂಕುಗಳ ಇತಿಹಾಸದಲ್ಲೇ ಇದು ಬಹುಶಃ ಅತ್ಯಂತ ಭಾರಿ ವಂಚನೆಯೆಂದು ಹೇಳಲಾಗುತ್ತಿದೆ. ಕೆಲವು ವರ್ಷಗಳ ಹಿಂದೆ ಇನ್ನೊಂದು ಬ್ಯಾಂಕಿನ ಲಂಡನ್ ಶಾಖೆಯಲ್ಲಿ ನಡೆದದ್ದೇ ಇದು ವರೆಗಿನ ಅತಿ ದೊಡ್ಡ ವಂಚನೆಯಾಗಿತ್ತು. ಗುಜರಾತಿನಲ್ಲೇ ರಾಷ್ಟ್ರೀಕೃತ ಬ್ಯಾಂಕುಗಳ ಇನ್ನೂರಕ್ಕೂ ಹೆಚ್ಚು ಕಛೇರಿಗಳಲ್ಲಿ ಮೋಸ ನಡೆದಿದೆಯೆಂಬುದು ಒಂದು ಅಂದಾಜು. ಒಂದೊಂದು ಪ್ರಕರಣದಲ್ಲೂ ಸುಮಾರು ರೂ. 20 ಲಕ್ಷದಿಂದ ರೂ. 4 ಕೋಟಿಯ ವರೆಗೆ ಛಪಾವಣೆಯಾಗಿರಬಹುದೆಂದು ಪ್ರಾಥಮಿಕ ತನಿಖೆಗಳಿಂದ ತಿಳಿದುಬಂದಿದೆ. ಬ್ಯಾಂಕು ಹಾಗೂ ಸರ್ಕಾರಿ ನೌಕರರು ಮತ್ತು ಸಾಲಗಾರರು ಒಂದಾಗಿ ನಡೆಸಿರುವ ಸಂಚುಗಳು ಇವು. ಕೇಂದ್ರ ತನಿಖಾಮಂಡಲಿ ಈ ಬಗ್ಗೆ ನಡಸುತ್ತಿರುವ ತನಿಖೆಯಿಂದ ಎಷ್ಟೋ ರಹಸ್ಯಗಳು ಬಯಲಾಗುತ್ತವೆ.

## ಕಪ್ಪು ಹಣದ ಚಾಲನೆ

ರಾಷ್ಟ್ರೀಕೃತ ಬ್ಯಾಂಕುಗಳ ಕಾಳ್ಬಾದೇವಿಯ ಕೆಲವು ಶಾಖೆಗಳು ಕಪ್ಪು ಹಣದ ಚಾಲನೆಗೆ ನೆರವು ನೀಡುತ್ತಿವೆಯೆಂಬುದು ವರಮಾನ ತೆರಿಗೆ ಅಧಿಕಾರಿಗಳು ನಡೆಸಿರುವ ಕಾರ್ಯಾಚರಣೆಗಳಿಂದ ಪತ್ತೆಯಾಗಿದೆ. ಈ ಶಾಖೆಗಳಲ್ಲಿ ಬೇನಾಮಿ ಖಾತೆಗಳನ್ನು ತೆರೆಯಲಾಗುತ್ತಿದೆ. ಮಿಥ್ಯಾನಾಮಗಳಿಗೆ ನೀಡಲಾದ ಡ್ರಾಫ್ಟುಗಳನ್ನು ಈ ಖಾತೆಗಳಿಗೆ ಜಮಾ ಮಾಡಲಾಗುತ್ತಿದೆ. ಇತ್ತೀಚಿಗೆ ವರಮಾನ ತೆರಿಗೆ ಅಧಿಕಾರಿಗಳು ದಾಳಿ ನಡೆಸಿ, ಸರಿಯಾದ ವಿವರಣೆ ಬಾರದ ಸುಮಾರು 25 ಲಕ್ಷ ರೂ.ಗಳನ್ನು ವಶಪಡಿಸಿಕೊಂಡಿದ್ದಾರೆ. ದೇಶದ ವಿವಿಧ ಭಾಗಗಳಿಂದ ಮುಂಬಯಿ ಬ್ಯಾಂಕುಗಳ ಮೇಲೆ ಬರೆಯಲಾದ 600 ಡ್ರಾಫ್ಟುಗಳು ಸಿಕ್ಕಿವೆ. ಬೇನಾಮಿ ಖಾತೆಗಳಲ್ಲಿರುವ ಸುಮಾರು 12 ಲಕ್ಷ ರೂ.ಗಳನ್ನು ಅವರು ನಿಶ್ಚಾಲನಗೊಳಿಸಿದ್ದಾರೆ.

ಕಳೆದ ಸೆಪ್ಟೆಂಬರಿನಲ್ಲಿ ಇದೇ ರೀತಿಯ ದಾಳಿಗಳನ್ನು ಅಧಿಕಾರಿಗಳು ನಡೆಸಿದ್ದರು. ಚಾಲ್ತಿ ಖಾತೆಗಳನ್ನು ತೆರೆಯುವಲ್ಲಿ ಬ್ಯಾಂಕುಗಳು ಅನುಸರಿಸಬೇಕಾದ ಕೆಲವು ಸ್ಥೂಲ ಸೂತ್ರಗಳನ್ನು ಆಗ ನೀಡಲಾಗಿತ್ತು. ಆದರೆ ಇವನ್ನು ಅನುಷ್ಠಾನಕ್ಕೆ ತಂದಿಲ್ಲವೆಂಬುದು ಅನಂತರದ ವಿದ್ಯಮಾನ

ಗಳಿಂದ ವೇದ್ಯವಾಗುತ್ತದೆ. ಕೆಲವು ಅವ್ಯವಹಾರಗಳ ಮಾದರಿಗಳು ಇವು : ಒಬ್ಬನೇ ವ್ಯಕ್ತಿ ಹಲವು ಹೆಸರುಗಳಲ್ಲಿ ಖಾತೆಗಳನ್ನು ತೆರೆದು ಆ ನಾನಾ ಹೆಸರುಗಳ ಸಹಿ ಮಾಡುತ್ತಿದ್ದಾನೆ. ಬ್ಯಾಂಕರರ ತಿಳಿವಳಿಕೆಗೆ ಒಳಪಟ್ಟೇ ಇದು ನಡೆಯುತ್ತಿದೆ. ಪಾಸ್ ಪುಸ್ತಕದಲ್ಲಿ ನೀಡಿರುವ ವಿಳಾಸ ಸುಳ್ಳು. ಖಾತೆ ತೆರೆಯಲು ನೀಡಿರುವ ಪರಿಚಯವೂ ಬರೀ ಸೃಷ್ಟನೆಯೇ. ಈ ಖಾತೆಗಳ ವ್ಯವಹಾರಗಳು ಎಷ್ಟರ ಮಟ್ಟಿಗೆ ಸಾಚಾ ಎಂಬುದನ್ನು ಬ್ಯಾಂಕು ಅಧಿಕಾರಿಗಳು ಪರಿಶೀಲಿಸುವುದು ಹಲವು ವೇಳೆ ಅಸಾಧ್ಯ. ಏಕೆಂದರೆ ಸಂಬಂಧಪಟ್ಟ ವ್ಯಕ್ತಿಗಳು ಖುದ್ದಾಗಿ ಬಂದು ತಮ್ಮ ಪತ್ರಗಳನ್ನು ತೆಗೆದು ಕೊಳ್ಳುತ್ತಾರೆ. ಕೆಲವು ಶಾಖೆಗಳಲ್ಲಿ ಡ್ರಾಫ್ಟುಗಳ ಮೊಬಲಗುಗಳನ್ನು ವಸೂಲಿಗೆ ಮುಂಚೆಯೇ ಖಾತೆಗಳಿಗೆ ಜಮೆ ಮಾಡಲಾಗುತ್ತಿದೆ. ಬ್ಯಾಂಕೊಂದು ತನ್ನ ಗ್ರಾಹಕನೊಬ್ಬನಿಗೆ 2 ಲಕ್ಷ ರೂ. ಗಳನ್ನು ಈ ರೀತಿ ಪಾವತಿ ಮಾಡಿದ್ದುದು ದಾಳಿಯ ಸಮಯದಲ್ಲಿ ಪತ್ತೆಯಾಯಿತು. ಆದರೆ ಡ್ರಾಫ್ಟಿನಲ್ಲಿಯ ದೋಷವೊಂದರಿಂದಾಗಿ ಅದರ ಮೊಬಲಗು ಪಾವತಿಯಾಗಲಿಲ್ಲ. ಅಧಿಕಾರಿಗಳು ಆ ಡ್ರಾಫ್ಟನ್ನು ವಶಪಡಿಸಿಕೊಂಡು ಆ ಖಾತೆಯನ್ನು ನಿಶ್ಚಾಲನಗೊಳಿಸಿದರು. ಆ ಎರಡು ಲಕ್ಷ ರೂ.ಗಳನ್ನು ಲೆಕ್ಕ ಪುಸ್ತಕಗಳಲ್ಲಿ ಹೇಗೆ ಹೊಂದಾವಣೆ ಮಾಡಬೇಕೆಂದು ಬ್ಯಾಂಕು ತೊಳಲಾಟಕ್ಕೆ ಸಿಲುಕಿಕೊಂಡಿತು. ತರಿಗೆ ಅಧಿಕಾರಿಗಳು ಖಾತೆದಾರನಿಗಾಗಿ ಹುಡುಕಾಟ ನಡೆಸಿದರು. ಆದರೆ ಆ ವಿಳಾಸವೇ ಸುಳ್ಳು. ಮುಂಬಯಿಯಲ್ಲಿ ಕನಿಷ್ಠ ರೂ. 50 ಕೋಟಿಯಷ್ಟು ಕಪ್ಪು ಹಣ ಡ್ರಾಫ್ಟು ಗಳ ರೂಪದಲ್ಲಿ ಚಲಾವಣೆಯಾಗುತ್ತಿದೆಯೆಂಬುದು ಒಂದು ಅಂದಾಜು.

ಒಟ್ಟಿನಲ್ಲಿ ಬ್ಯಾಂಕುಗಳಲ್ಲಿ ದಕ್ಷತೆಗೆ ವಿಶೇಷ ಗಮನ ನೀಡಬೇಕೆಂಬುದಕ್ಕೆ ಇದು ನಿದರ್ಶನ. ಕಟ್ಟುನಿಟ್ಟಾದ ಆಂತರಿಕ ಪರಿಶೋಧನ, ಲೆಕ್ಕ ಪರೀಕ್ಷಣ, ತನಿಖೆ, ಸಿಬ್ಬಂದಿಯ ನೇಮಕದಲ್ಲಿ ಪ್ರಾಮಾಣಿಕತೆ ಯೋಗ್ಯತೆಗಳಿಗೆ ಆದ್ಯತೆ, ಬ್ಯಾಂಕು ಲೆಕ್ಕವ್ಯವಸ್ಥೆಯ ಆಧುನೀಕರಣ, ಸಾಧ್ಯ ವಿದ್ದಲ್ಲೆಲ್ಲ ಕಂಪ್ಯೂಟರ್ ಬಳಕೆ, ಅಂದಂದಿನ ಲೆಕ್ಕಗಳನ್ನು ಅಂದಂದೇ ಮುಗಿಸುವಂತೆ ನಿರ್ಬಂಧ, ಸೂಕ್ತ ಪರಿಚಯ ಹಾಗೂ ಪರಿಶೀಲನೆಯ ಅನಂತರವೇ ಹೊಸ ಖಾತೆಗಳ ಆರಂಭ—ಇಂಥ ಕ್ರಮಗಳಿಂದ ಈ ಅನಿಷ್ಟ ಪ್ರವೃತ್ತಿಗಳನ್ನು ಬಹಳಮಟ್ಟಿಗೆ ಹತ್ತಿಕ್ಕುವುದು ಸಾಧ್ಯ. ನಮ್ಮ ಹಣಕಾಸು ಮಂತ್ರಿ ಪ್ರಣವ ಮುಖರ್ಜಿಯವರು ಹೇಳಿರುವ ಹಾಗೆ ಜಾಗ್ರತ ವ್ಯವಸ್ಥೆಯನ್ನು ಬಲಗೊಳಿಸುವುದು ಅತ್ಯಗತ್ಯ.

## ಕೃತಜ್ಞತೆ

ಈ ಸಂಚಿಕೆಯಿಂದ 'ಬ್ಯಾಂಕಿಂಗ್ ಪ್ರಪಂಚ' ಪತ್ರಿಕೆಯನ್ನು ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್‌ನ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಅವರು ಅಚ್ಚುಮಾಡುತ್ತಿದ್ದಾರೆ. ಇದುವರೆಗೆ ಇದನ್ನು ಮುದ್ರಿಸುತ್ತಿದ್ದ ಈಸ್ಟರ್ನ್ ಪ್ರೆಸ್ಸಿನ ಶ್ರೀ ಚಿಂತಾಮಣಿ ಅವರಿಗೆ ನಾವು ಕೃತಜ್ಞರಾಗಿದ್ದೇವೆ. ಆರಂಭದ ವರ್ಷಗಳಲ್ಲಿ ಶ್ರೀ ಚಿಂತಾಮಣಿ ಅವರು ಇದರ ಮುದ್ರಣದ ಹೊಣೆ ವಹಿಸಿಕೊಂಡು ಉಪಕಾರಮಾಡಿದ್ದಾರೆ. ಶ್ರೀ ಚಿಂತಾಮಣಿ ಅವರಂತೆಯೇ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಅವರೂ ಮುದ್ರಣ ಕ್ಷೇತ್ರದಲ್ಲಿ ಉತ್ತಮ ಮಟ್ಟವನ್ನು ಸದಾ ಕಾಯ್ದುಕೊಂಡು ಬರುತ್ತಿರುವವರು. ಇವರ ನೆರವಿನಿಂದ 'ಬ್ಯಾಂಕಿಂಗ್ ಪ್ರಪಂಚ' ಎಂದಿನಂತೆ ಆಕರ್ಷಕವಾಗಿ ಸಕಾಲದಲ್ಲಿ ಹೊರಬರುವ ಭರವಸೆ ನಮಗಿದೆ. ಇವರಿಗೆ ನಮ್ಮ ವಂದನೆಗಳು.

# ನಾಡಲ್ಲಿ ನವೋದಯಕ್ಕೆ ನಾಂದಿ:

**ಹೊಸ ಆಡಳಿತದ ರವಿ ಮೂಡಲು**
**ಇನ್ನಿಲ್ಲ ಎಲ್ಲೂ ಕತ್ತಲು**
**ಹೊಸ ಬಾಳಿಗೆ ತೆರೆಯಿತು ಬಾಗಿಲು**
**ಎಲ್ಲೆಲ್ಲೂ ಸಂತಸದ ಹೊನಲು**

ಆಡಳಿತದಲ್ಲಿ ಎಲ್ಲ ಹಂತಗಳಲ್ಲೂ ಫೆಬ್ರುವರಿ 15ರಿಂದ ಕನ್ನಡ ಭಾಷೆ ಬಳಸಲು ಕಟ್ಟುನಿಟ್ಟಿನ ಆಜ್ಞೆ. ಕನ್ನಡ ಮಾಧ್ಯಮ ಶಾಲೆಗಳಿಗೆ ಹೆಚ್ಚಿನ ಪ್ರೋತ್ಸಾಹ. ಜೊತೆಗೆ ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆಗೂ ಗಮನ.

- ಆಹಾರ ಧಾನ್ಯಗಳ ಹಾಗೂ ಆವಶ್ಯಕ ವಸ್ತುಗಳ ಬೆಲೆಗಳು ಈಗ ನಿಯಂತ್ರಿತ. ರಾಜ್ಯದ ಹೊರಗೆ ಆಹಾರ ಧಾನ್ಯಗಳ ಸಾಗಾಣಿಕೆಗೆ ತಡೆ. ನ್ಯಾಯ ಬೆಲೆ ಅಂಗಡಿಗಳಲ್ಲಿ ಅಕ್ಕಿಯ ಬೆಲೆ ಇಳಿತ. ಇದರಿಂದ ಜನಸಾಮಾನ್ಯರಿಗೂ ಹಿತ.
- ಹೊಸ ಸರ್ಕಾರ, ಹೊಸ ನಿರ್ಧಾರ, ಸ್ವಚ್ಛ ಆಡಳಿತ ಇದಕ್ಕಾಗಿ ಲೋಕ ಆಯುಕ್ತ.
- ಆಡಳಿತ ವಿಕೇಂದ್ರೀಕರಣ, ಜನರಿಗೆ ಆಡಳಿತದಲ್ಲಿ ಸಮಪಾಲು. ಅದಕ್ಕಾಗಿ ಪುರಸಭೆಗಳು, ಗ್ರಾಮ ಪಂಚಾಯಿತಿಗಳು, ಸಹಕಾರಿ ಸಂಸ್ಥೆಗಳ ಚುನಾವಣೆಗಳನ್ನು ನಡೆಸಲು ಸರ್ಕಾರದ ಆದೇಶ. ಮಹಿಳೆಯರಿಗೆ ಹೆಚ್ಚು ಪ್ರಾತಿನಿಧ್ಯ ಅವಕಾಶ.
- ನವಯುವಕರು ತಮ್ಮ ಪ್ರತಿನಿಧಿಗಳನ್ನು ನವಚೈತನ್ಯದೊಡನೆ ಆಯ್ಕೆ ಮಾಡಲು ಮತದಾರರ ವಯೋಮಿತಿ 21ರಿಂದ 18ಕ್ಕೆ ಇಳಿತ.
- ರೈತ ಸಮುದಾಯದ ಬೇಡಿಕೆ ಸಮಸ್ಯೆಗಳ ಸುಧಾರಣೆ, ಇದಕ್ಕಾಗಿ ಪ್ರತಿನಿಧಿಗಳೊಡನೆ ನೇರ ವಿಚಾರಣೆ, ಸಾಲ ವಸೂಲಿಗೆ ತಾತ್ಕಾಲಿಕ ತಡೆ. ರೈತರ ವಿರುದ್ಧ ಚಳವಳಿಯ ಕಾಲದಲ್ಲಿ ಹೂಡಿದ್ದ ಮೊಕದ್ದಮೆಗಳಿಂದ ರೈತರಿಗೆ ಬಿಡುಗಡೆ.
- ಕಾರ್ಮಿಕರ ಸಮಸ್ಯೆಗಳ ಬಗ್ಗೆ ಕಾರ್ಮಿಕ ನಾಯಕರೊಡನೆ ನೇರ ವಿಚಾರಣೆ. ವಿಶ್ವ ಕಾರ್ಮಿಕರ ದಿನದಂದು ರಜಾ ಘೋಷಣೆ.
- ಪಕ್ಷಾಂತರ ನಿವಾರಣೆಗೆ ತೀವ್ರ ಕ್ರಮ. ಭಿನ್ನಾಭಿಪ್ರಾಯಕ್ಕೆ ಮನ್ನಣೆ. ಪಕ್ಷಾಂತರ ತಡೆಗೆ ಮಸೂದೆಯ ಮಂಡನೆ.
- ಹಿಂದುಳಿದ ಜನಗಳ ಮತ್ತು ಅಲ್ಪಸಂಖ್ಯಾತರ ಹಿತರಕ್ಷಣೆಗಾಗಿ ಆಯೋಗದ ರಚನೆ, ಹೊಸ ಸರ್ಕಾರದ ಇನ್ನೊಂದು ಸಾಧನೆ.
- ದುರ್ಬಲವರ್ಗದ ಅಭಿವೃದ್ಧಿ, ಬಡತನ ನಿರ್ಮೂಲನೆ, ನಿರುದ್ಯೋಗ ನಿವಾರಣೆ ಅದಕ್ಕಾಗಿ ಪರಿಣತರ ಚಿಂತನನಿಧಿ ಸ್ಥಾಪನೆ, ಹೊಸಹೊಸ ಕಾರ್ಯಕ್ರಮಗಳ ಸೂಚನೆ.

ಪ್ರಕಟಣೆ :

ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

# ವಿದೇಶೀ ವ್ಯಾಪಾರ ಮತ್ತು ಭಾರತದ ರಫ್ತಾಮದು ಬ್ಯಾಂಕ್

ಕೆ. ಎನ್. ಮಹಾಬಲ

## ಶಿವನಸಮುದ್ರದಲ್ಲಿ ಏರ್ಪಡಿಸಿದ್ದ ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಿದ ಪ್ರಬಂಧವೊಂದು

ಒಂದು ದೇಶದ ಸರ್ವತೋಮುಖ ಆರ್ಥಿಕ ಅಭಿವೃದ್ಧಿಯಲ್ಲಿ ವಿದೇಶೀ ವ್ಯಾಪಾರದ ಪಾತ್ರವನ್ನು ಅಲ್ಲಗಳೆಯಲಾಗದು. ಅದರಲ್ಲಿಯೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ದ್ರವತ್ವ ಹಾಗೂ ಧೃಡತ್ವವನ್ನು ತಂದುಕೊಡುವ ಸಾಧ್ಯತೆಯಿರುವ ರಫ್ತುವ್ಯಾಪಾರದ ಪಾತ್ರವಂತೂ ಇನ್ನೂ ಮಹತ್ವಪೂರ್ಣವಾದುದು. ಏಪ್ರಿಲ್-ಜೂನ್ 82ರ ಅವಧಿಯಲ್ಲಿ ಭಾರತದ (ವಿದೇಶೀ) ವ್ಯಾಪಾರ ಸಿಲ್ಕಿನಲ್ಲಿ (ಬ್ಯಾಲೆನ್ಸ್ ಆಫ್ ಟ್ರೇಡ್) ರೂ. 1,519 ಕೋಟಿಗಳ ಖೋತಾ ಕಂಡುಬಂದಿತು ಮತ್ತು ಅಂತರರಾಷ್ಟ್ರೀಯ ಹಣ ನಿಧಿಯಿಂದ ವಿಶೇಷ ನೆರವನ್ನು ಪಡೆಯಬೇಕಾಯಿತು ಎಂಬ ವಾಸ್ತವಿಕ ಅಂಶಗಳು ವಿದೇಶೀ ವ್ಯಾಪಾರದ, ಅದರಲ್ಲೂ ರಫ್ತು ವ್ಯಾಪಾರದ, ಅಗತ್ಯವನ್ನು ಪುಷ್ಟಿಗೊಳಿಸುತ್ತವೆ.

ವಿದೇಶೀ ವ್ಯಾಪಾರದ ಪರಿಧಿ ಬಹಳ ವಿಸ್ತೃತವಾದುದು. ಅದನ್ನು ಸಿದ್ಧಗೊಳಿಸಿದ ಸರಕಿನ ರಫ್ತು, ಉತ್ಪಾದಕ ಕಚ್ಚಾ ಸಾಮಗ್ರಿಗಳ ಆಮದು, ಆಮದಾದ ಕಚ್ಚಾಸಾಮಗ್ರಿಗಳಿಂದ ಸಿದ್ಧಗೊಳಿಸಿದ ಸರಕಿನ ರಫ್ತು, ಆಮದಿಗೆ ಬದಲಾಗಿ ಆಂತರಿಕವಾಗಿ ಲಭ್ಯವಿರುವ ಅನ್ಯಪದಾರ್ಥಗಳ ಬಳಕೆ ಇವೆಲ್ಲದರ ಕಾರ್ಯಾಚರಣೆಯ ವ್ಯಾಪ್ತಿಯಲ್ಲಿ ಅಭ್ಯಾಸ ಮಾಡಬೇಕು. ರಫ್ತಾಗುವ ಸರಕುಗಳ ಸರಣಿಯಂತೂ ಬಹಳ ವಿಭಿನ್ನವಾದುದು. ಗುಡಿಕೈಗಾರಿಕೆ ಉತ್ಪನ್ನ ಅಗರಬತ್ತಿಯಿಂದ ಹಿಡಿದು ಬೃಹತ್ ಉತ್ಪಾದಕಯಂತ್ರ, ನಾಗರಿಕ ಕಾಮಗಾರಿ ಯೋಜನೆಗಳು, ತಜ್ಞ-ಸಲಹಾ ಯೋಜನೆಗಳು ಮುಂತಾದವುಗಳನ್ನು ಅದು ಒಳಗೊಂಡಿದೆ. ಆಂತರಿಕ ಆರ್ಥಿಕ ಅಭಿವೃದ್ಧಿಗೆ ಹೋಲಿಸಿದರೆ ವಿದೇಶೀ ವ್ಯಾಪಾರ ಕ್ಷೇತ್ರ ಹಾಗೂ ಗಾತ್ರದಲ್ಲಿ ಕಡಿಮೆಯಿರಬಹುದಾದರೂ, ಅರ್ಥ ವ್ಯವಸ್ಥೆಯಲ್ಲಿ ಅದರ ಪಾತ್ರ ಕಿರಿದೇನೂ ಅಲ್ಲ.

### ಹಿನ್ನೆಲೆ

ಈ ಹಿನ್ನೆಲೆಯಲ್ಲಿ ವಿದೇಶೀ ವ್ಯಾಪಾರದ ಅಗತ್ಯವನ್ನು ಮನಗಂಡು ಐವತ್ತರ ದಶಕದ ಮಧ್ಯದಲ್ಲೇ ಹಲವಾರು ವಿಶೇಷ ವಿದೇಶೀ ವ್ಯಾಪಾರ ಸಂಸ್ಥೆಗಳನ್ನು ಹುಟ್ಟುಹಾಕಲಾಯಿತಾದರೂ, ವಿದೇಶೀ ವ್ಯಾಪಾರದ ಹೆಚ್ಚಳ ಸಾಧಿಸುವಲ್ಲಿ ಆ ಸಂಸ್ಥೆಗಳ ಪಾತ್ರ ನಿರಾಶಾದಾಯಕವಾದುದು. ರಫ್ತು ಮಂಡಳಿ (ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್ ಮತ್ತು ಪದಾರ್ಥಮಂಡಳಿ (ಕಮಾಡಿಟಿ ಬೋರ್ಡ್), ರಫ್ತು ಬದಲಿ ಖಾತರಿ ನಿಗಮ (ಎಕ್ಸ್‌ಪೋರ್ಟ್ ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್) ಮೊದಲಾದ ಸಂಸ್ಥೆಗಳು ವಿದೇಶಿ ವಿನಿಮಯದ ಸಂಪಾದನೆಯಲ್ಲಿ ಗಣನೀಯ ಹೆಚ್ಚಳ ತೋರಿಸಿದವು ಎಂದು ಸಾಧಿಸಲಾಯಿತು. ಆದರೆ ಆ ಹೆಚ್ಚಳ ರಚನಾತ್ಮಕವಾಗಿರದೆ ಹಣದುಬ್ಬರದ ಅಂತರರಾಷ್ಟ್ರೀಯ ಸಾರ್ವತ್ರಿಕ ಪ್ರವೃತ್ತಿಯಿಂದ ಉಂಟಾಗಿದ್ದುವು ಎಂಬುದಂತೂ ನಿಜ. ಅಂಕಿಅಂಶಗಳ ದೃಷ್ಟಿಯಿಂದ ಮಾತ್ರವೇ ಅಗಾಧವೆಂದು ತೋರಿದ ಉತ್ಪನ್ನಗಳನ್ನು ಸೇರಿಸಿಕೊಂಡಿದ್ದ ಕೆಲವು ಉದಾಹರಣೆಗಳೂ ಇದ್ದುವು. ಭಾರತದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕು (ಇಂಡಸ್ಟ್ರಿಯಲ್ ಡೆವೆಲಪ್‌ಮೆಂಟ್ ಬ್ಯಾಂಕ್ ಆಫ್ ಇಂಡಿಯ) ತನ್ನ ಸ್ಥಾಪನೆಯಾದಂದಿನಿಂದ ವಿದೇಶೀ ವ್ಯಾಪಾರದ ಅಭಿವೃದ್ಧಿಗೆ ಶ್ರಮಿಸಿತಾದರೂ, ಆಂತರಿಕ ಕೈಗಾರಿಕಾಭಿವೃದ್ಧಿಯ ಜವಾಬ್ದಾರಿಯೂ ಅದರ ಮೇಲಿದ್ದುದರಿಂದ ಈ ನಿಟ್ಟಿನಲ್ಲಿ ವಿಶೇಷ ಗಮನ ನೀಡುವುದು ಸಾಧ್ಯವಾಗಲಿಲ್ಲ. ಇಂಥದೊಂದು ಸಂಕ್ರಮಣ ಸ್ಥಿತಿಯಲ್ಲಿ ವಿದೇಶೀ ವ್ಯಾಪಾರವನ್ನು ಸಮರ್ಥವಾಗಿ, ಅಧಿಕಾರಯುತವಾಗಿ ಮತ್ತು ಲಾಭಪ್ರದವಾಗಿ ನಡೆಸಿಕೊಡುವ ಸಂಸ್ಥೆಯೊಂದರ ಅಗತ್ಯ ಬಹಳವಾಗಿ ಕಂಡುಬಂತು.

ಭಾರತದ ರಫ್ತಾಮದು ಬ್ಯಾಂಕ್ (ಎಕ್ಸ್‌ಪೋರ್ಟ್-ಇಂಪೋರ್ಟ್ ಬ್ಯಾಂಕ್ ಆಫ್ ಇಂಡಿಯ) ಸ್ಥಾಪನೆಯ ನಿರ್ಧಾರ ಈ ದಿಸೆಯಲ್ಲಿ ಒಂದು ಪ್ರಗತಿಯ ಹೆಜ್ಜೆ. ಇಂಥದೊಂದು ಬ್ಯಾಂಕ್‌ನ ಸ್ಥಾಪನೆಯ ಸಲಹೆಯನ್ನು 1967 ರಷ್ಟು ಹಿಂದೆಯೇ ಆಗಿನ ವಾಣಿಜ್ಯ ಕಾರ್ಯದರ್ಶಿಯಾಗಿದ್ದ ಡಿ. ಎಸ್. ಜೋಷಿಯವರು ನೀಡಿದ್ದರು. ಬ್ಯಾಂಕಿಂಗ್ ಆಯೋಗ ನಿರಾಸಕ್ತಿ ತೋರಿಸಿದುದರ ಪರಿಣಾಮವಾಗಿ ಆಗ ಅದು ಕಾರ್ಯಗತವಾಗಲಿಲ್ಲ. ಇದೀಗ ಪಾರ್ಲಿಮೆಂಟಿನ ಉಭಯ ಸದನಗಳೂ ಈ ಸಂಸ್ಥೆಯ ಆರಂಭಕ್ಕೆ ಹಸಿರು ನಿಶಾನೆ ತೋರಿಸಿದ್ದು, ಶ್ರೀ ಆರ್. ಸಿ. ಷಾರವರು ಅಧ್ಯಕ್ಷ ಹಾಗೂ ವ್ಯವಸ್ಥಾಪಕ ನಿರ್ದೇಶಕರಾಗಿರುವ ರಫ್ತಾಮದು ಬ್ಯಾಂಕ್ 1982ರ ಜನವರಿ 1ರಂದು ಕಾರ್ಯಾರಂಭ ಮಾಡಿದೆ.

### ಸಂರಚನೆ

ರಫ್ತಾಮದು ಬ್ಯಾಂಕ್ ಸರ್ಕಾರಿ ಸ್ವಾಮ್ಯದ ಶಾಸನಬದ್ಧ ನಿಗಮ ಆಗಿದ್ದು ಪ್ರಾರಂಭಿಕವಾಗಿ ರೂ. 50 ಕೋಟಿ ಪಾವತಿಯಾದ ಬಂಡವಾಳ ಹೊಂದಿದೆ (ಬ್ಯಾಂಕ್‌ನ ಅಧಿಕೃತ ಬಂಡವಾಳ ರೂ. 200 ಕೋಟಿ; ಅದನ್ನು ರೂ. 500 ಕೋಟಿಗೆ ಹೆಚ್ಚಿಸುವ ಅವಕಾಶವಿದೆ). ಆರಂಭಿಕವಾಗಿ ಕೇಂದ್ರ ಸರಕಾರ ಇಪ್ಪತ್ತು ಕೋಟಿ ರೂ.ಗಳ ಸಾಲ ನೀಡಿದೆ. ರಿಸರ್ವ್ ಬ್ಯಾಂಕಿನಿಂದ ಸಾಲ ಪಡೆಯುವ, ಸಾರ್ವಜನಿಕವಾಗಿ ಠೇವಣಿ ಸಂಗ್ರಹಿಸುವ, ಮಾರುಕಟ್ಟೆ ಸಾಲ ಎತ್ತುವ ಅಧಿಕಾರ ಬ್ಯಾಂಕಿಗೆ ಇದೆ. ಅಲ್ಲದೆ ವಿದೇಶದಲ್ಲಿ ಸಾಲ ಪಡೆಯುವ ಪರವಾನಗಿಯೂ ಇದೆ. ಹೀಗೆ ವಿವಿಧ ಮೂಲಗಳಿಂದ ಸಂಗ್ರಹಿಸುವ ಸಂಪನ್ಮೂಲಗಳ ಸರಾಸರಿ ವೆಚ್ಚ ಮಾರುಕಟ್ಟೆಯ ಬಡ್ಡಿದರಕ್ಕಿಂತ ಕಡಿಮೆಯಿರುವುದರಿಂದ ಮತ್ತು ತೆರಿಗೆ ವಿನಾಯಿತಿಯ ಸೌಲಭ್ಯವೂ ಇರುವುದರಿಂದ ಬ್ಯಾಂಕ್ ಮೃದು ಸಾಲನೀಡಲು ಅನುಕೂಲವಾಗುತ್ತದೆ.

ರಫ್ತಾಮದು ಬ್ಯಾಂಕಿನ ಆಡಳಿತ ಮಂಡಳಿಯಲ್ಲಿ ಕೇಂದ್ರ ಸರ್ಕಾರದಿಂದ ನೇಮಕವಾದ ಒಬ್ಬ ಅಧ್ಯಕ್ಷ ಮತ್ತು ವ್ಯವಸ್ಥಾಪಕ ನಿರ್ದೇಶಕ ಇರುತ್ತಾರೆ. ಇವೆರಡೂ ಅಧಿಕಾರಗಳನ್ನು ಒಬ್ಬರೇ ನಿರ್ವಹಿಸಲೂ ಅವಕಾಶವಿದೆ. ಇದರೊಂದಿಗೆ ನಿರ್ದೇಶಕ ಮಂಡಳಿಯಲ್ಲಿ ರಿಸರ್ವ್ ಬ್ಯಾಂಕಿನಿಂದ ಒಬ್ಬರು, ಐ.ಡಿ.ಬಿ.ಐ.ನಿಂದ ಒಬ್ಬರು, ಇ.ಸಿ.ಜಿ.ಸಿ.ಯಿಂದ ನೇಮಿತರಾದ ಒಬ್ಬರು ಮತ್ತು ಕೇಂದ್ರ ಸರ್ಕಾರದಿಂದ ನೇಮಿಸಲ್ಪಟ್ಟ ಹನ್ನೆರಡು ಮಂದಿ (ಐದು ಕೇಂದ್ರ ಸರಕಾರದ ಅಧಿಕಾರಿಗಳು, ಮೂರು ಜನ ವಾಣಿಜ್ಯ ಬ್ಯಾಂಕ್ ಪ್ರತಿನಿಧಿಗಳು, ವೃತ್ತಿಪರ ಅನುಭವವುಳ್ಳ ನಾಲ್ಕು ಪ್ರತಿನಿಧಿಗಳು) ಇರುತ್ತಾರೆ.

### ಕಾರ್ಯಭಾರಗಳು

ಭಾರತದ ವಿದೇಶಿ ವ್ಯಾಪಾರದ ಮುಖ್ಯ ಆತಂಕಗಳೆಂದರೆ ಗುಣಮಟ್ಟದ ಕೊರತೆ ಹಾಗೂ ನಿಖರವಾದ ಸರಕು ಪೂರೈಕೆ ಕಾರ್ಯದ ಅಸಮರ್ಪಕತೆ. ಇಂಧನ-ವಿದ್ಯುತ್-ಉಕ್ಕು ಇವುಗಳ ಅಭಾವ ಕೈಗಾರಿಕಾಸಾಮರ್ಥ್ಯದ ಪೂರ್ಣ ಬಳಕೆಯನ್ನು ಕುಂಠಿತಗೊಳಿಸಿದೆ. ಬಟ್ಟೆಗಿರಣಿಗಳೂ ಸೇರಿದಂತೆ ಕೈಗಾರಿಕೆಗಳ ಆಧುನೀಕರಣ ಬಹಳ ಹಿಂದೆ ಬಿದ್ದಿದೆ. ರಫ್ತಾಮದು ಬ್ಯಾಂಕ್‌ನ ಉದ್ದೇಶ ಸಫಲವಾಗಬೇಕಾದರೆ, ಕೈಗಾರಿಕೆಗಳ ಈ ಮೂಲಭೂತ ಸಮಸ್ಯೆಗಳ ನಿರ್ಮೂಲನವಾಗಬೇಕು. ಅಲ್ಲದೆ, ಬರುವ ದಿನಗಳಲ್ಲಿ ಭಾರತ ನೆರೆಯ ಮೂರನೆಯ ವಿಶ್ವದ ರಾಷ್ಟ್ರಗಳಿಗೆ ಯಂತ್ರ ಹಾಗೂ ಯಂತ್ರಸ್ಥಾವರವನ್ನು ರಫ್ತು ಮಾಡುವ ಸಾಧ್ಯತೆಯಿದೆ. ರಫ್ತಾಮದು ಬ್ಯಾಂಕ್‌ನ ಪಾತ್ರ ವಿಶಿಷ್ಟವೆನಿಸುವುದು ಇಂಥ ಸಂದರ್ಭದಲ್ಲೇ. ಇದರೊಂದಿಗೆ ಕೈಗಾರಿಕೆಯಲ್ಲಿ ಉತ್ತೇಜನಕಾರಿ ವಿನಿಯೋಜನೆಯ ಪ್ರವೃತ್ತಿ ಕಂಡುಬರುವಂತೆ ಸಾಧ್ಯಮಾಡುವುದು ಅದರ ಇನ್ನೊಂದು ಕರ್ತವ್ಯವಾಗಿದೆ.

ಈ ಹಿನ್ನೆಲೆಯಿಂದ ನೋಡಿದಾಗ ರಫ್ತಾಮದು ಬ್ಯಾಂಕಿನ ಉದ್ದೇಶಗಳು ಬಹಳ ಮಸಕಾಗಿವೆ. ಮೊದಲನೆಯದಾಗಿ ಬ್ಯಾಂಕು ಭಾರತೀಯ ಉತ್ಪನ್ನಗಳನ್ನು ರಫ್ತು ಮಾಡುವ ವ್ಯಕ್ತಿಗಳಿಗೆ, ವಿದೇಶದಲ್ಲಿ ನಾಗರಿಕ ಎಂಜಿನಿಯರಿಂಗ್ ಪರಿಯೋಜನೆ ಕಾರ್ಯ ಕೈಗೊಳ್ಳುವವರಿಗೆ, ಮತ್ತು ವಿದೇಶದಲ್ಲಿ ಹೊಸ ಉದ್ಯಮ ಸ್ಥಾಪಿಸುವವರಿಗೆ, ಸ್ವತಃ ಅಥವಾ ಇತರ ವಾಣಿಜ್ಯ ಬ್ಯಾಂಕ್‌ಗಳ ಒಡಗೂಡಿ ಸಾಲ ಮತ್ತು ಮುಂಗಡ ನೀಡಬೇಕು. ಇದೊಂದು ಬಹುವ್ಯಾಪೀ ಸ್ವರೂಪದ ಉದ್ದೇಶ. ಈ ಉದ್ದೇಶ ಸಂದಿಗ್ಧಕ್ಕೇನೂ ಎಡೆ ಮಾಡುವುದಿಲ್ಲ. ಆದರೆ ರಫ್ತಾಮದು ಬ್ಯಾಂಕ್‌ನ ಕಾರ್ಯಾಚರಣೆಯ ಕ್ಷೇತ್ರವನ್ನೇನೂ ಸ್ಪಷ್ಟವಾಗಿ ತಿಳಿಸುವುದಿಲ್ಲ.

ರಫ್ತಾಮದು ಬ್ಯಾಂಕು ವಾಣಿಜ್ಯ ಬ್ಯಾಂಕುಗಳು ನೀಡುವಂತೆ ಅಲ್ಪಾವಧಿ ಸಾಲವನ್ನು ನೀಡುವುದಿಲ್ಲ. ಏಕೆಂದರೆ ಅದರ ಮೂಲ ಉದ್ದೇಶ ಬಂಡವಾಳಸರಕು ರಫ್ತು, ಪರಿಯೋಜನಾ ರಫ್ತು, ನಾಗರಿಕ ನಿರ್ಮಾಣ ಕಾರ್ಯ, ಸೇವೆ ಹಾಗೂ ಸಲಹೆ—ಇವುಗಳಿಂದ ಜನಿತವಾಗುವ ವಿದೇಶೀ ವ್ಯಾಪಾರವನ್ನು ಹೆಚ್ಚಿಸುವುದು. ಏಷ್ಯಾ ಮತ್ತು ಆಫ್ರಿಕಾ ದೇಶಗಳಲ್ಲಿ ಪರಿಯೋಜನಾ ರಫ್ತುಗಳಿಗೆ ಹೆಚ್ಚು ಬೇಡಿಕೆಯಿದ್ದಾಗ್ಯೂ, ಭಾರತ ಇತರ ಅಭಿವೃದ್ಧಿ ಹೊಂದಿದ ದೇಶಗಳಿಂದ ಗುಣಮಟ್ಟದ ಔನ್ನತ್ಯದ ಪೈಪೋಟಿಯನ್ನು ಎದುರಿಸುತ್ತಿದೆ.

ಎಂಜಿನಿಯರಿಂಗ್ ರಫ್ತುಪ್ರವರ್ತನ ಮಂಡಳಿ 1991ರ ಹೊತ್ತಿಗೆ ಎಂಜಿನಿಯರಿಂಗ್ ರಫ್ತಿನ ಶೇ. 50ರಷ್ಟು ಪರಿಯೋಜನಾ ರಫ್ತು (ಪ್ರಾಜೆಕ್ಟ್ ಎಕ್ಸ್‌ಪೋರ್ಟ್) ರೂಪದಲ್ಲಿರುತ್ತದೆಂದು ಇಂಗಿತ ಕೊಟ್ಟಿದೆ. ಈ ಅಂಶವನ್ನು ಗಣನೆಗೆ ತೆಗೆದುಕೊಂಡರೆ, ರಫ್ತಾಮದು ಬ್ಯಾಂಕ್ ತನ್ನ ಗರಿಷ್ಠ ಆದ್ಯತೆಯನ್ನು ಪರಿಯೋಜನಾ ರಫ್ತು ಧನಪೋಷಣೆಗೆ ನೀಡಬೇಕಾಗುತ್ತದೆ.

ರಫ್ತಾಮದು ಬ್ಯಾಂಕ್ ಸರ್ಕಾರ-ಸರ್ಕಾರಗಳ ನಡುವಿನ ಸಾಲ ಹಾಗೂ ರಫ್ತು ಸಾಲಗಳ ಮಿಶ್ರಿತವಾದ ವ್ಯವಹಾರವನ್ನು ನಿರ್ವಹಿಸುತ್ತದೆ. ಬಿಡ್ ಬಾಂಡು ನೀಡುವುದು,

ಖಾತರಿ ನೀಡುವುದು ಮುಂತಾದುವುಗಳನ್ನು ವಾಣಿಜ್ಯ ಬ್ಯಾಂಕುಗಳ ಸಹಯೋಗದೊಂದಿಗೆ ಭಾರತದ ರಫ್ತುದಾರರ ಪರವಾಗಿ ನಿರ್ವಹಿಸುತ್ತದೆ. ರಫ್ತಾಮದು ಬ್ಯಾಂಕ್‌ಗೆ ವಹಿಸಲಾಗಿರುವ ಇತರ ಪ್ರಮುಖ ಕರ್ತವ್ಯಗಳೆಂದರೆ :

1 ಭಾರತದ ಹೊರಗೆ ವಾಸವಾಗಿರುವ ಜನ ಭಾರತದ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುವಂತೆ, ನಾಗರಿಕ ನಿರ್ಮಾಣ ಯೋಜನೆಗಳು, ತಂತ್ರಜ್ಞಾನದ ಸೇವೆಗಳು ಮತ್ತು ಇತರ ಸಲಹಾಸೇವೆಗಳನ್ನು ಆಮದು ಮಾಡಿಕೊಳ್ಳಲು ಅನುವಾಗುವಂತೆ ಸರ್ಕಾರಗಳಿಗೆ, ವಾಣಿಜ್ಯ ಸಂಸ್ಥೆಗಳಿಗೆ, ಮತ್ತು ಇತರ ಅರ್ಹ ಸಂಸ್ಥೆಗಳಿಗೆ ಉದರಿ ವ್ಯವಸ್ಥೆಯನ್ನು ಕಲ್ಪಿಸುವುದು.

2 ಸರ್ಕಾರಿ ಸಾಲ ಹಾಗೂ ವಾಣಿಜ್ಯ ಸಾಲ ಇವೆರಡರ ಸಮ್ಮಿಶ್ರದ ರಫ್ತುವ್ಯವಹಾರವನ್ನು ನಿರ್ವಹಿಸುವುದು.

3 ಭಾರತದಲ್ಲಿ ಮತ್ತು ಹೊರಗೆ, ಸ್ವತಃ ಹಾಗೂ ವಾಣಿಜ್ಯ ಬ್ಯಾಂಕುಗಳ ಸಹಯೋಗದೊಂದಿಗೆ, ಬಿಡ್ ಬಾಂಡುಗಳನ್ನು ಹಾಗೂ ಖಾತರಿಗಳನ್ನು ನೀಡುವುದು.

4 ರಫ್ತು ಹುಂಡಿಗಳನ್ನು ಕೊಳ್ಳುವುದು, ವಟಾಯಿಸುವುದು ಹಾಗೂ ವ್ಯವಹರಿಸುವುದು.

5 ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ರಫ್ತು ಹುಂಡಿಯನ್ನು ಮಾರಾಟ ಮಾಡುವುದು ಮತ್ತು ವಟಾಯಿಸುವುದು.

6 ವಾಣಿಜ್ಯ ಸಂಸ್ಥೆ/ಬ್ಯಾಂಕುಗಳು ವ್ಯವಹರಿಸುವ/ಕೊಳ್ಳುವ ರಫ್ತು ಹುಂಡಿಗಳನ್ನು ವಟಾವಣೆ ಮಾಡುವುದು ಅಥವಾ ಅಂಥ ಹುಂಡಿಗಳ ಆಧಾರದ ಮೇಲೆ ಸಾಲ ನೀಡುವುದು.

7 ಸರಕಾರದಿಂದ ಸೂಚಿತರಾದ ಸರಕು ರಫ್ತುದಾರರಿಗೆ, ಪರಿಯೋಜನಾ ರಫ್ತುದಾರರಿಗೆ ನಾಗರಿಕ ನಿರ್ಮಾಣ ಒಪ್ಪಂದ ರಫ್ತುದಾರರಿಗೆ ವಾಣಿಜ್ಯ ಬ್ಯಾಂಕ್ ಸಾಲ ನೀಡಿದ್ದಲ್ಲಿ, ಅಂಥ ಸಾಲಗಳಿಗೆ ಮರುಹಣಕಾಸು (ರೀ ಫೈನಾನ್ಸ್) ವ್ಯವಸ್ಥೆ ಕಲ್ಪಿಸುವುದು.

8 ವಿದೇಶದಿಂದ ಆಮದು ಮಾಡಿಕೊಳ್ಳುವ ಸರಕು ಹುಗೂ ಸೇವೆಗಳಿಗೆ ಸ್ವತಃ ಅಥವಾ ವಾಣಿಜ್ಯ ಬ್ಯಾಂಕ್ ಒಡಗೂಡಿ ಸಾಲ/ಖಾತರಿ ನೀಡುವುದು.

9 ಸರ್ಕಾರದಿಂದ ಸೂಚಿತವಾದ ವಾಣಿಜ್ಯ ಬ್ಯಾಂಕ್ ಅಥವಾ ಸಂಸ್ಥೆಗಳು ಸರಕು ಹಾಗೂ ಸೇವೆಗಳ ಆಮದಿನ ಸಂಬಂಧದಲ್ಲಿ ನೀಡಿರುವ ಸಾಲಗಳಿಗೆ ಪುನರ್ಧನವ್ಯವಸ್ಥೆ ಕಲ್ಪಿಸುವುದು.

10 ಭಾರತದ ರಫ್ತುದಾರರ ಪರವಾಗಿ ಉದರಿ ಪತ್ರಗಳಿಗೆ ಖಾತರಿ ನೀಡುವುದು, ಉದರಿ ಪತ್ರದನ್ವಯ ವ್ಯವಹರಿತವಾಗುವ ಹುಂಡಿಗಳನ್ನು ನಿರ್ವಹಿಸುವುದು, ವಸೂಲಿ ಮಾಡುವುದು, ಆಮದುದಾರರ ಪರವಾಗಿ ಉದರಿ ಪತ್ರಗಳನ್ನು ತೆರೆಯುವುದು ಮತ್ತು ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ನಿರ್ವಹಿಸುವುದು.

11 ರಫ್ತಾಮದು ಬ್ಯಾಂಕ್ ವ್ಯವಹಾರದ ಸಂಬಂಧದಲ್ಲಿ ವಿದೇಶಿ ಬ್ಯಾಂಕ್ ಹಾಗೂ ಪ್ರತಿನಿಧಿಗಳಲ್ಲಿ ವಿದೇಶಿ ಕರೆನ್ಸಿ ಖಾತೆ ಹೊಂದುವುದು.

12 ರಫ್ತಾಮದು ಬ್ಯಾಂಕ್ ವ್ಯವಹರಿಸಲು ಸಾಧ್ಯವಾಗುವಂತೆ, ವಿದೇಶೀ ವಿನಿಮಯದ ಮಾರಾಟ ಕೊಳ್ಳಿಕೆ ಮತ್ತಿತರ ಅಧಿಕೃತ ವ್ಯಾಪಾರಕ್ಕೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸುವುದು.

13 ಅಂತರರಾಷ್ಟ್ರೀಯ ವ್ಯಾಪಾರದ ಉತ್ತೇಜನ ಹಾಗೂ ಅಭಿವೃದ್ಧಿಯ ದೃಷ್ಟಿಯಿಂದ ಸಂಶೋಧನೆ, ಸಮೀಕ್ಷೆ ಮತ್ತು ಅರ್ಥತಂತ್ರಜ್ಞಾನದ ಅಧ್ಯಯನ ಕೈಗೊಳ್ಳುವುದು ಮತ್ತು ಅಂತಹವುಗಳಿಗೆ ಹಣವನ್ನು ನೀಡುವುದು.

14 ರಫ್ತುದಾರರಿಗೆ ಅಥವಾ ರಫ್ತು ವ್ಯಾಪಾರದಲ್ಲಿ ತೊಡಗಬಯಸುವ ಯಾವುದೇ ವ್ಯಾಪಾರಿಗೆ ಉದ್ಯಮ ಆರಂಭಿಸಲು, ನಿರ್ವಹಿಸಲು ಅಥವಾ ವಿಸ್ತರಿಸಲು ತಾಂತ್ರಿಕ, ಆಡಳಿತಾತ್ಮಕ ಹಾಗೂ ಆರ್ಥಿಕ ನೆರವನ್ನು ನೀಡುವುದು.

**ಆಕ್ಷೇಪಣೆ-ಸಮಾಧಾನ**

ಹೀಗೆ ರಫ್ತಾಮದು ಬ್ಯಾಂಕಿನ ಉದ್ದೇಶಗಳಲ್ಲಿ ಬೃಹತ್ ಸಾಲದ ನೆರವು, ಪಾವತಿ ಮುಂದೂಡಿದ ರಫ್ತು (ಡೆಫರ್ಡ್ ಪೇಮೆಂಟ್ ಎಕ್ಸ್‌ಪೋರ್ಟ್), ನಾಗರಿಕ ನಿರ್ಮಾಣ ಕಾರ್ಯದ ರಫ್ತು, ಹೊಸ ಉದ್ಯಮದ/ಪರಿಯೋಜನೆಯ ಪ್ರವರ್ತನದಂತಹ ವಿಸ್ತೃತ ಕಾರ್ಯಗಳು ಸೇರಿವೆ. ಇವೆಲ್ಲವನ್ನೂ ಸೂಕ್ಷ್ಮವಾಗಿ ಅವಲೋಕಿಸಿದಾಗ ಕೆಲವು ಪ್ರಶ್ನೆಗಳು ಉದ್ಭವಿಸುತ್ತವೆ. ಐ.ಡಿ.ಬಿ.ಐ ನಂತಹ ಸುಸ್ಥಾಪಿತವಾದ ಸಂಸ್ಥೆ ಸಮರ್ಥವಾಗಿ ನಿರ್ವಹಿಸುತ್ತಿದ್ದ ವಿದೇಶಿ ವ್ಯಾಪಾರವನ್ನು ಹೊಸದೊಂದು ಸಂಸ್ಥೆಗೆ ಹಠಾತ್ತನೆ ವರ್ಗಾಯಿಸುವುದು ಸಾಧುವೆ ? ಇಂಥದೊಂದು ವಿಶೇಷೀಕೃತ ಸಂಸ್ಥೆಯ ಸ್ಥಾಪನೆ ಹಾಲಿ ಇರುವ ಸರ್ಕಾರಿ ಸಂಸ್ಥೆಗಳ ಸಂಖ್ಯೆಗೆ ಮತ್ತೊಂದು ಸೇರಿದಂತೆ ಮಾತ್ರ ಆಗುವುದಲ್ಲವೆ ? ವಿದೇಶೀ ವ್ಯಾಪಾರದ ಅಭಿವೃದ್ಧಿಗೆ ಈಗ ನಮ್ಮ ವಾಣಿಜ್ಯ ಬ್ಯಾಂಕುಗಳು ಪ್ರಾಮುಖ್ಯವನ್ನು ನೀಡುತ್ತಿಲ್ಲವೆ ? ಹೀಗೆಲ್ಲಾ ಅನಿಸುವುದು ಸ್ವಾಭಾವಿಕ. ಸ್ಪಷ್ಟವಾಗಿ ರಫ್ತಾಮದು ಬ್ಯಾಂಕಿನ ಕಾರ್ಯೋದ್ದೇಶಗಳಲ್ಲಿ ವಿದೇಶೀ ವ್ಯಾಪಾರವನ್ನು ವ್ಯವಸ್ಥಿತವಾಗಿ ಹಾಗೂ ಸಮರ್ಥವಾಗಿ ಅಭಿವೃದ್ಧಿಪಡಿಸುವುದು ಮುಖ್ಯವಾದುದು. ಐಡಿಬಿಐ ವಿದೇಶಿವ್ಯಾಪಾರ ಅಭಿವೃದ್ಧಿ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿತ್ತು ಎಂಬುದು ನಿರ್ವಿವಾದವಾದರೂ, ದೇಶದ ಆಂತರಿಕ ಕೈಗಾರಿಕಾಭಿವೃದ್ಧಿಯ ಭಾರ ಅದರ ಮೇಲಿದ್ದಿತಾದ್ದರಿಂದ, ವಿದೇಶೀ ವ್ಯಾಪಾರಕ್ಕೆ ವಿಶೇಷ ಗಮನ ನೀಡಲಾಗಲಿಲ್ಲ. ಹೀಗಿರುವಾಗ ಇದನ್ನು ವಿಶೇಷವಾಗಿ ನಿರ್ವಹಿಸುವ ಸಂಸ್ಥೆಯ ಅಗತ್ಯ ತಳ್ಳಿಹಾಕುವಂಥದಲ್ಲ.

ಮತ್ತೊಂದು ಆಕ್ಷೇಪಣೆಯಾದ, ವಾಣಿಜ್ಯ ಬ್ಯಾಂಕುಗಳ

ಅಸಮರ್ಪಕತೆಯನ್ನು ಕುರಿತು ಹೇಳುವುದಾದರೆ, ಬ್ಯಾಂಕುಗಳು ತಮ್ಮ ವಿವಿಧ ವ್ಯವಹಾರಗಳ ನಡುವೆ ವಿದೇಶಿ ವ್ಯಾಪಾರವನ್ನೂ ಗಮನಿಸಬೇಕಾಗಿರುವುದು. ದೀರ್ಘಾವಧಿ ಪರಿಯೋಜನೆಗಳಿಗೆ ಸಾಲ ನೀಡುವುದು ವಾಣಿಜ್ಯ ಬ್ಯಾಂಕುಗಳ ದ್ರವತ್ವದ ದೃಷ್ಟಿಯಿಂದ ಅಸಾಧುವಾದುದು. ಏಕೆಂದರೆ ಬ್ಯಾಂಕುಗಳ ಸಂಪನ್ಮೂಲದ ಬುನಾದಿ ಅಲ್ಪಾವಧಿ ಸ್ವರೂಪದ್ದು. ಹೀಗೆ ವಾಣಿಜ್ಯ ಬ್ಯಾಂಕುಗಳು ರಫ್ತು-ಆಮದು ವ್ಯವಹಾರದ ಸಂಬಂಧದಲ್ಲಿ ಅಲ್ಪಾವಧಿ ಸಾಲ ನೀಡುವುದು, ಹುಂಡಿಗಳನ್ನು ವರ್ಗಾಯಿಸುವುದು ಇಂತಹ ಸೌಲಭ್ಯ ನೀಡುವುದು ಸಾಧ್ಯವೇ ವಿನಾ ಪರಿಯೋಜನಾ ರಫ್ತು, ವಿದೇಶದಲ್ಲಿ ಹೊಸ ಉದ್ಯಮ ಸ್ಥಾಪನೆ ಇಂತಹ ದೀರ್ಘಾವಧಿ ಸ್ವರೂಪದ, ಹೆಚ್ಚು ಸಂಪನ್ಮೂಲ ಬೇಡುವ ಬಾಬ್ತುಗಳಿಗೆ ಧನಪೋಷಣೆ ನೀಡಲಾಗುವುದಿಲ್ಲ. ಈ ಕಾರ್ಯವನ್ನು ವಿಶೇಷ ಪರಿಣತರನ್ನು ಪಡೆದ, ಈ ಗುರಿಯನ್ನೇ ಪ್ರತ್ಯೇಕವಾಗಿ ಹೊಂದಿದ, ಸಂಸ್ಥೆಯೊಂದು ಮಾತ್ರ ಸಮರ್ಥವಾಗಿ ನಿರ್ವಹಿಸಬಲ್ಲುದು. ಅದಕ್ಕೆಂದೇ ರಫ್ತಾಮದು ಬ್ಯಾಂಕ್ ಅತ್ಯಗತ್ಯ ಎಂಬುದು ಸಿದ್ಧಪಟ್ಟ ಅಂಶ.

ರಫ್ತಾಮದು ಬ್ಯಾಂಕ್ ವಿದೇಶದಲ್ಲಿ ಸಾಲ ಎತ್ತುತ್ತದೆ. ನಿಸ್ಸಂಶಯವಾಗಿ ಇದೊಂದು ಪ್ರಮುಖವಾದ ಕಾರ್ಯ. ಏಕೆಂದರೆ ಬಹಳಷ್ಟು ಯೋಜನೆಗಳಿಗೆ ಆಮದು ಸಂಪನ್ಮೂಲ ಕೊರತೆಯಿದೆ. ಆದರೆ ಯಾವ ಆದ್ಯತೆಯ ಮೇಲೆ ಈ ವಿದೇಶೀ ನೆರವು ನೀಡಬೇಕು ಎಂಬುದು ಸಮಸ್ಯೆಯಾಗಿದೆ. ಸಾಮಾಜಿಕವಾಗಿ ಅತ್ಯುನ್ನತ ಲಾಭ ನೀಡುವ ಮತ್ತು ದೇಶೀಯ ಉತ್ಪನ್ನಗಳಿಗೆ ಅಂತರರಾಷ್ಟ್ರೀಯ ಪೈಪೋಟಿಯ ಸಾಮರ್ಥ್ಯವನ್ನು ತಂದುಕೊಡುವ ಮತ್ತು ಆ ಮೂಲಕ ಒಟ್ಟು ರಾಷ್ಟ್ರೀಯ ವರಮಾನ ಹೆಚ್ಚಿಸುವ ಕ್ರಿಯೆಗೆ ಪ್ರಾಮುಖ್ಯ ನೀಡಬೇಕು. ಅಂದರೆ ರಫ್ತು ಅಭಿವೃದ್ಧಿ ಮತ್ತು ಆಮದು ಶಿಷ್ಟೀಕರಣ ಇವೆರಡೂ ಅರ್ಥಪೂರ್ಣ ಅಭಿವೃದ್ಧಿಯ ಅಂಗಗಳಾಗಬೇಕು. ಹೀಗೆ ರಫ್ತಾಮದು ಬ್ಯಾಂಕ್ ವಿದೇಶೀ ವ್ಯಾಪಾರವನ್ನು ಅಭಿವೃದ್ಧಿಪಡಿಸುವ ಸಂಸ್ಥೆಯಾಗಬೇಕೇ ಹೊರತು, ಕೇವಲ ಹಣ ನೆರವು ನೀಡುವ ಸಂಸ್ಥೆಯಾಗಬಾರದು ಎಂಬುದು ಸತ್ಯ. ಅದರ ರಚನೆ ಹಾಗೂ ಕಾರ್ಯವಿಧಾನ ಎರಡೂ ಈ ಗುರಿಗೇ ಹೊಂದಿ ನಡೆಯಬೇಕು. 1975ರಲ್ಲಿ ಕೇಂದ್ರ ವಾಣಿಜ್ಯ ಮಂತ್ರಾಲಯದವರು ಬಿ.ಡಿ. ಕುಮಾರ್ ಅವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ರಫ್ತಾಮದು ಬ್ಯಾಂಕ್ ಸಮಿತಿಯ ವರದಿ ಕೂಡ ಇದನ್ನೇ ಸ್ಪಷ್ಟಪಡಿಸುತ್ತದೆ, ಇಲ್ಲಿ ಉಲ್ಲೇಖಿತವಾಗಿರುವ ಮತ್ತೊಂದು ವಿಷಯವೆಂದರೆ, ಸಾಗರೋತ್ತರ ಮಾರುಕಟ್ಟೆಗಳು, ಉತ್ಪನ್ನಗಳು ಹಾಗೂ ಉದರಿ ಪದ್ಧತಿಗಳು ಇವನ್ನು ತಿಳಿಸುವ ಮಾಹಿತಿ ವ್ಯವಸ್ಥೆಯನ್ನು ಹೊಂದುವುದರ ಅಗತ್ಯ. ಪ್ರಸಕ್ತ ಈ ಪರಿಯೋಜನಾ ರಫ್ತುಸಂಬಂಧದಲ್ಲಿ ಅಂತಹ ಸಂಪರ್ಕದ ಕೊರತೆಯಿದೆ. ಬಿಡ್ ಬಾಂಡು ನೀಡುವಂತಹ ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಕೆಲವು ಮುಖ್ಯ ನಿರ್ಧಾರ ತೆಗೆದುಕೊಳ್ಳುವಾಗಲಂತೂ ಇಂಥ ಮಾಹಿತಿ ವ್ಯವಸ್ಥೆ ಅತ್ಯಗತ್ಯ. ಈವರೆಗೆ ಅಂಥ ನಿರ್ಧಾರಗಳನ್ನು ಅಂದಾಜಿನ ಮೇಲೆ ತೆಗೆದುಕೊಳ್ಳಲಾಗುತ್ತಿತ್ತು. ಹೀಗೆ ಅವೈಜ್ಞಾನಿಕವಾಗಿ ನಿರ್ಧರಿಸುವುದು ಯೋಜನಾಬದ್ಧ ಹಾಗೂ ಕ್ರಮವಾದ ವಿದೇಶೀ ವ್ಯಾಪಾರದ ಪ್ರಗತಿಗೆ ಮಾರಕ. ಹೀಗೆ ರಫ್ತಾಮದು ಬ್ಯಾಂಕು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಬೇಕಾದರೆ ತನ್ನ ಆದ್ಯತೆಗಳನ್ನು ಸರಿಯಾಗಿ ರೂಪಿಸಿಕೊಳ್ಳಬೇಕು.

---

# ವಿಶೇಷ ಡ್ರಾಯಿಂಗ್ ಹಕ್ಕುಗಳು

ಬಿ. ಎಸ್. ಚಂದ್ರಶೇಖರ

## ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧ

ಪ್ರಪಂಚದ ಅತ್ಯಂತ ಪ್ರಮುಖ ಆರ್ಥಿಕ ಸಮಸ್ಯೆ ಎಂದರೆ ಅಂತರರಾಷ್ಟ್ರೀಯ ದ್ರವತ್ವವನ್ನು ಕುರಿತದ್ದು. ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ಕೊಳ್ಳುವ ಸರಕಿಗೆ ಬದಲು ನಿರ್ದಿಷ್ಟ ದೇಶದ ನಾಣ್ಯದ ರೂಪದಲ್ಲಿ ಅದರ ಮೌಲ್ಯವನ್ನು ನೀಡುವುದೇನೋ ಸರಿಯೇ. ಆದರೆ ಬಹುಮುಖ ಆರ್ಥಿಕ ಚಟುವಟಿಕೆಗಳಿಂದ ತುಂಬಿರುವ ಆಧುನಿಕ ಪ್ರಪಂಚದ ವ್ಯವಹಾರಗಳಲ್ಲಿ ದ್ರವತ್ವದ ಸಮಸ್ಯೆ ಇಷ್ಟು ಸರಳವಾಗಿ ಉಳಿದಿಲ್ಲ. ವಿವಿಧ ನಾಣ್ಯಗಳ ಮೌಲ್ಯಗಳಲ್ಲಿ ಗಣನೀಯ ಪ್ರಮಾಣದ ಏರಿಳಿತಗಳು ಅನತಿಕಾಲದಲ್ಲೇ ಉಂಟಾಗಬಹುದಾದ ಚಂಚಲ ಸ್ಥಿತಿಯಲ್ಲಿ ಯಾವ ನಾಣ್ಯಕ್ಕೆ ಅಂತರ ರಾಷ್ಟ್ರೀಯತೆಯ ಪಟ್ಟ? ಇಂದು ಅತ್ಯಂತ 'ಗಟ್ಟಿ' ಎನ್ನಿಸಿಕೊಂಡ ನಾಣ್ಯ ನಾಳೆ ಮೆತ್ತಗಾಗಬಹುದು. ಅಥವಾ ಇಂದು ಕಡೆಗಣಿಸಬಹುದಾದ ನಾಣ್ಯ ಮಾರುಕಟ್ಟೆಯ ವೈಪರೀತ್ಯಗಳಿಂದ ಮುಂದೆ ಅಗ್ರಪಟ್ಟಕ್ಕೇರಬಹುದು. ಹೀಗಾಗಿ ಯಾವೊಂದು ನಾಣ್ಯವೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಶಾಶ್ವತವಾದ ಸಾರ್ವಭೌಮಸ್ಥಾನವನ್ನು ಉಳಿಸಿಕೊಳ್ಳಲು ಸಾಧ್ಯವಾಗದು.

ಅಂತರರಾಷ್ಟ್ರೀಯ ವ್ಯಾಪಾರ ಅಭಿವೃದ್ಧಿ ಹೊಂದಬೇಕಾದರೆ ರಾಷ್ಟ್ರಗಳು ಪರಸ್ಪರವಾಗಿ ಸರಕುಗಳನ್ನು ಹೆಚ್ಚು ಹೆಚ್ಚಾಗಿ ಕೊಳ್ಳಬೇಕಷ್ಟೆ? ಅಂತರರಾಷ್ಟ್ರೀಯ ಮಾನ್ಯತೆ ಪಡೆದಿರುವಂಥ ನಾಣ್ಯ ತನ್ನಲ್ಲಿಲ್ಲದ ರಾಷ್ಟ್ರವೊಂದು ಇಂಥ ಚಟುವಟಿಕೆಯಲ್ಲಿ ಭಾಗವಹಿಸುವುದು ಹೇಗೆ? ಬಹುತೇಕ ರಾಷ್ಟ್ರಗಳು ತಾವು ಕೊಳ್ಳಬೇಕಾದ ಸರಕುಗಳು ವಿಶ್ವಮಾರುಕಟ್ಟೆಯಲ್ಲಿದ್ದರೂ ತಮ್ಮಲ್ಲಿ ಹಣವಿಲ್ಲದೆ ವ್ಯಾಪಾರದಲ್ಲಿ ಭಾಗವಹಿಸಲಾಗುವುದಿಲ್ಲ. ಇದು ಅಂತರರಾಷ್ಟ್ರೀಯ ದ್ರವತ್ವ ಸಮಸ್ಯೆ. 1960ರ ದಶಕದಲ್ಲಿ ಪ್ರಪಂಚದ ಹಣ ಸಂಚಿತಿಯ (ಮಾನಿಟರಿ ರಿಸರ್ವ್) ಹೆಚ್ಚಳ ಅಂತರರಾಷ್ಟ್ರೀಯ ವ್ಯಾಪಾರದ ಪರಿಮಾಣದಲ್ಲಿಯ ಹೆಚ್ಚಳಕ್ಕಿಂತ ತೀರ ಕಡಮೆ ಇದ್ದು, ದ್ರವತ್ವದ ಕೊರತೆಯಿಂದ ಪ್ರಪಂಚದ ವ್ಯಾಪಾರ ಕುಸಿಯಬಹುದೆಂಬ ಭೀತಿ ಉಂಟಾಯಿತು.

ಅಂತರರಾಷ್ಟ್ರೀಯ ಹಣಕಾಸು ಸಹಕಾರವನ್ನು ಅಭಿವೃದ್ಧಿಪಡಿಸುವ ಗುರಿಯನ್ನುಳ್ಳ 'ಅಂತರರಾಷ್ಟ್ರೀಯ ಹಣ ನಿಧಿ' (ಇಂಟರ್‌ನ್ಯಾಷನಲ್ ಮಾನಿಟರಿ ಫಂಡ್) [ಇನ್ನು ಮುಂದೆ ಈ ಲೇಖನದಲ್ಲಿ ಇದನ್ನು 'ನಿಧಿ' ಎಂದು ಕರೆಯಲಾಗುವುದು] ಈ ದ್ರವತ್ವದ ಸಮಸ್ಯೆಯನ್ನು ಪರಿಹರಿಸಲು ಒಂದು ಯೋಜನೆಯನ್ನು ಜಾರಿಗೆ ತಂದಿತು. ನಿಧಿಯ ಎಲ್ಲ ಸದಸ್ಯ ರಾಷ್ಟ್ರಗಳೂ ಈ ಯೋಜನೆಯ ಫಲವನ್ನು ಪಡೆಯಬಹುದು. ಸದಸ್ಯ ರಾಷ್ಟ್ರಗಳು ತಮ್ಮ ಹಕ್ಕಿನಂತೆ ಪಡೆಯಬಹುದಾದ ಕಾಪು ಆಸ್ತಿಯೊಂದನ್ನು ನಿಧಿಯು ನಿರ್ಮಿಸಿ (ಸದಸ್ಯ ರಾಷ್ಟ್ರಗಳಿಗೆ) ನಿರ್ದಿಷ್ಟ ಪ್ರಮಾಣದ ಪುಸ್ತಕ ಸಾಲಗಳನ್ನು ನೀಡಿತು. ಈ ಪುಸ್ತಕ ಸಾಲಗಳ ಪರಿಮಾಣ ಆಯಾ ರಾಷ್ಟ್ರ ನೀಡುವ ವಂತಿಗೆಯ ಗಾತ್ರವನ್ನು ಆಧರಿಸಿದ್ದು ಪಾವತಿ ಸಿಲ್ಕಿನ ಖೋತಾ ಅನುಭವಿಸುತ್ತಿರುವ ರಾಷ್ಟ್ರ ಈ ಸಾಲವನ್ನು ಉಪಯೋಗಿಸಿಕೊಳ್ಳಲು ಅವಕಾಶ ಕಲ್ಪಿಸಲಾಯಿತು. 1969ರ ಜುಲೈ ತಿಂಗಳ 28ನೆಯ ತಾರೀಖು ಜಾರಿಗೆ ಬಂದ ಈ ಯೋಜನೆ ಶೀಘ್ರದಲ್ಲೇ 'ವಿಶೇಷ ಡ್ರಾಯಿಂಗ್ ಹಕ್ಕುಗಳು' (ಸ್ಪೆಷಲ್ ಡ್ರಾಯಿಂಗ್ ರೈಟ್ಸ್ ಅಥವಾ ಎಸ್.ಡಿ.ಆರ್. ಎಂದು) ಜನಜನಿತವಾಯಿತು.

### ವಿಶೇಷ ಡ್ರಾಯಿಂಗ್ ಹಕ್ಕುಗಳ ಕಾರ್ಯವಿಧಾನ

ಆರಂಭದಲ್ಲಿ ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕವನ್ನು ಅಮೆರಿಕನ್ ಡಾಲರಿನ (ಆಗಿನ) ಚಿನ್ನದ ಬೆಲೆಗೆ ಸಮ ಎಂದು ಪರಿಗಣಿಸಲಾಗುತ್ತಿತ್ತು. ನಿಧಿ ಕಲ್ಪಿಸಿದ ವಿಶೇಷ ಡ್ರಾಯಿಂಗ್ ಹಕ್ಕುಗಳನ್ನು ಪಾವತಿ ಸಿಲ್ಕಿನ ವೈಪರೀತ್ಯದಿಂದ ತೊಂದರೆ ಅನುಭವಿಸುತ್ತಿರುವ ರಾಷ್ಟ್ರ ಉಪಯೋಗಿಸಿಕೊಳ್ಳಬಹುದು.

1 ಪ್ರತಿಯೊಂದು ರಾಷ್ಟ್ರಕ್ಕೂ ಅದರ ಅಂತರರಾಷ್ಟ್ರೀಯ ವ್ಯಾಪಾರದ ಗಾತ್ರವನ್ನು ಆಧರಿಸಿ ನಿರ್ದಿಷ್ಟ ಮೊತ್ತದ ವಿಶೇಷ ಡ್ರಾಯಿಂಗ್ ಹಕ್ಕುಗಳು ಲಭ್ಯವಾಗುತ್ತವೆ.

2 ಅಂತರರಾಷ್ಟ್ರೀಯ ವಿನಿಮಯ ಮಾರುಕಟ್ಟೆಯಲ್ಲಿ ಇತ್ತೀಚಿನವರೆಗೂ ವಿಶೇಷ ಡ್ರಾಯಿಂಗ್ ಹಕ್ಕುಗಳ ವ್ಯಾಪಾರ ಇರಲಿಲ್ಲ. ಆದರೆ 1981ರಲ್ಲಿ ನಿಧಿ ಕೈಗೊಂಡ ನಿರ್ಣಯದಿಂದ ಈ ಸ್ಥಿತಿ ಬದಲಾಗಿದೆ. ವಿದೇಶಿ ವಿನಿಮಯವನ್ನು ಪಡೆಯಲು ಈ ವಿಡ್ರಾಹಗಳನ್ನು ರಾಷ್ಟ್ರದ ಕೇಂದ್ರ ಬ್ಯಾಂಕುಗಳಿಗೆ ಸುಲಭವಾಗಿ ವರ್ಗಾಯಿಸಲು ಅವಕಾಶವಿದೆ.

3 ತನಗೆ ನೀಡಲಾದ ವಿಶೇಷ ಡ್ರಾಯಿಂಗ್ ಹಕ್ಕುಗಳಲ್ಲಿ ಶೇ. 70ನ್ನು ಸದಸ್ಯರಾಷ್ಟ್ರ 3ರಿಂದ 5 ವರ್ಷಗಳೊಳಗೆ ಉಪಯೋಗಿಸಿಕೊಳ್ಳಬಹುದು.

4 ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಕ್ಕೆ ವಿಶೇಷ ಡ್ರಾಯಿಂಗ್ ಹಕ್ಕುಗಳಲ್ಲಿ ಹಣ ಪಾವತಿಮಾಡಬಹುದು.

5 ತನಗೆ ನಿಧಿ ನೀಡಿದ ವಿಶೇಷ ಡ್ರಾಯಿಂಗ್ ಹಕ್ಕುಗಳಿಗಿಂತ ಹೆಚ್ಚಿನ ಮೊತ್ತದ ವಿಡ್ರಾಹಗಳುಳ್ಳ ರಾಷ್ಟ್ರಗಳು ಹೆಚ್ಚಿನ ಮೊತ್ತಕ್ಕೆ ನಿಧಿಯಿಂದ ಸಾಮಾನ್ಯವಾಗಿ ಶೇ. $1\frac{1}{2}$ಯಷ್ಟು ಬಡ್ಡಿ ಪಡೆಯುತ್ತವೆ.

'ವಿಶೇಷ ಡ್ರಾಯಿಂಗ್ ಹಕ್ಕು' ಎಂಬಲ್ಲಿ 'ಹಕ್ಕು' ಎಂಬ ಶಬ್ದವಿರುವುದರಿಂದ ಒಂದು ಸ್ಪಷ್ಟೀಕರಣ ಅಗತ್ಯವೆನಿಸುತ್ತದೆ. ಅಂತರರಾಷ್ಟ್ರೀಯ ಹಣನಿಧಿಯ ಸದಸ್ಯರಾಷ್ಟ್ರಗಳು ನಿಧಿಯಿಂದ ನಿರ್ದಿಷ್ಟ ಮೊತ್ತವನ್ನು ಪಡೆಯುವ 'ಹಕ್ಕು' ಹೊಂದಿರುತ್ತವೆ ಎಂಬುದೇನೋ ನಿಜ. ಆದರೆ ವಿಶೇಷ ಡ್ರಾಯಿಂಗ್ ಹಕ್ಕು ವಾಸ್ತವವಾಗಿ ಒಂದು ಹಕ್ಕು ಅಲ್ಲ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿಶೇಷ ಡ್ರಾಯಿಂಗ್ ಹಕ್ಕು ಒಂದು ಹಣಘಟಕ.

ವಿಡ್ರಾಹ ಅಂತರರಾಷ್ಟ್ರೀಯ ಮಾರುಕಟ್ಟೆಗೆ ಬಂದುದು ಒಂದು ಪ್ರಮುಖ ಬದಲಾವಣೆ. ಅಂತರರಾಷ್ಟ್ರೀಯ ನಾಣ್ಯಗಳಲ್ಲಿ ಡಾಲರ್, ಪೌಂಡ್‌ಸ್ಟರ್ಲಿಂಗ್‌ಗಳು ಗಣ್ಯತೆ ಪಡೆದಿದ್ದಾಗ ಇದು ಜಾರಿಗೆ ಒಂದು ಚಿನ್ನಕ್ಕೆ ಸಲ್ಲುತ್ತಿದ್ದ ಅತಿ ಮರ್ಯಾದೆಯನ್ನು ಕುಗ್ಗಿಸಿತು. ಕ್ರಮೇಣ ಬಹುತೇಕ ಎಲ್ಲ ರಾಷ್ಟ್ರಗಳ 'ಕಾಪು'ಗಳಲ್ಲಿಯೂ ವಿಡ್ರಾಹಗಳು ಸ್ಥಾನ ಗಳಿಸಿಕೊಂಡವು. ಇವುಗಳ ಪ್ರಾಬಲ್ಯ ಇದೇ ರೀತಿ ಮುಂದುವರಿದರೆ ಚಿನ್ನ ಅನಾಣ್ಯೀಕರಣಗೊಳ್ಳುವುದೆಂಬ(ಡೀಮಾನಿಟೈಸ್) ಭಾವನೆಯೂ ಇದೆ.

## ವಿ.ಡ್ರಾ. ಹಕ್ಕಿನ ಮೌಲ್ಯ

ಮೊದಲಿಗೆ ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕದ ಮೌಲ್ಯವನ್ನು ಅಮೆರಿಕನ್ ಡಾಲರಿನ ಚಿನ್ನದ ಬೆಲೆಗೆ ಸಮವೆಂದು ಒಪ್ಪಲಾಗಿದ್ದರೂ ಸ್ವಲ್ಪ ಕಾಲದ ಅನಂತರ ಅದರ ಮೌಲ್ಯವನ್ನು 16 ಅಂತರರಾಷ್ಟ್ರೀಯ ನಾಣ್ಯಗಳ ಮೌಲ್ಯವನ್ನಾಧರಿಸಿ ನಿಷ್ಕರ್ಷಿಸಲಾಯಿತು. ಈ ಹದಿನಾರು ನಾಣ್ಯಗಳ ಗುಂಪನ್ನು Basket of Currencies (ನಾಣ್ಯಗಳ ಬುಟ್ಟಿ ಅಥವಾ ಹೆಡಿಗೆ) ಎಂದು ಕರೆಯುವುದುಂಟು. ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕ ಈ 16 ನಾಣ್ಯಗಳ ನಿರ್ದಿಷ್ಟ ಪ್ರಮಾಣಗಳ ಮೌಲ್ಯದ ಮೊತ್ತಕ್ಕೆ ಸಮ. ವಿಶ್ವ ಮಾರುಕಟ್ಟೆಯಲ್ಲಿ ರಫ್ತು ಮತ್ತು ಸೇವೆಗಳ ವ್ಯವಹಾರದ ಶತಾಂಶಕ್ಕಿಂತ ಅಧಿಕಪಾಲನ್ನು ಹೊಂದಿವೆಯೆಂಬ ಆಧಾರದ ಮೇಲೆ ಈ ನಾಣ್ಯಗಳನ್ನು ಆಯ್ಕೆ ಮಾಡಲಾಯಿತು. ವಿಡ್ರಾಹದ ಘಟಕವೊಂದರಲ್ಲಿ ನಾಣ್ಯವೊಂದರ ಪ್ರಮಾಣ ವಿಶ್ವಮಾರುಕಟ್ಟೆಯ ಸರಕು ಮತ್ತು ಸೇವೆಗಳ ರಫ್ತು ವ್ಯವಹಾರದಲ್ಲಿ ಆ ನಾಣ್ಯ ಹೊಂದಿರುವ ಪಾಲಿಗೆ ಅನುಗುಣವಾಗಿ ನಿರ್ದಿಷ್ಟಪಡಿಸಲಾಗಿತ್ತು.

ವಿಶೇಷ ಡ್ರಾಯಿಂಗ್ ಹಕ್ಕಿನ ಬಗೆಗೆ ನಡೆದ ಆರಂಭಿಕವಾದ ವಿವಾದಗಳು ಕುತೂಹಲಕಾರಿಯಾಗಿವೆ. ಅದರ ಮೌಲ್ಯವನ್ನು ಕುರಿತ ಮೂಲಭೂತ ಭಿನ್ನಾಭಿಪ್ರಾಯ ಈ ವಾದ ವಿವಾದಗಳಲ್ಲಿ ಮುಖ್ಯವಾದದ್ದು. ಅಂತರರಾಷ್ಟ್ರೀಯ ಹಣದ ಮೌಲ್ಯವನ್ನು ಚಿನ್ನದ ಮೌಲ್ಯಕ್ಕೆ ತಳಕು ಹಿಂದೆ ಹಾಕಬೇಕೆಂದು ಹ್ವೈಟ್ ಎಂಬ ಅರ್ಥಶಾಸ್ತ್ರಜ್ಞರು ಬಲವಾಗಿ ವಾದ ಮಂಡಿಸಿದ್ದರು. ಕೇನ್ಸ್ ಎಂಬ ಮತ್ತೊಬ್ಬ ಅರ್ಥಶಾಸ್ತ್ರಜ್ಞರು ಹಳದಿ ಲೋಹದ ಮೋಹ ಅನಾಗರಿಕವಾದದ್ದು ಎಂದು ಹಿಂದೆ ಪ್ರತಿಪಾದಿಸಿದ್ದರು. ಈ ಎರಡು ವಾದಗಳಿಗೂ ಆಗ ಸಾಕಷ್ಟು ಬೆಂಬಲವಿದ್ದು, ಇಂದಿಗೂ ಅವು ಹ್ವೈಟ್ ಪ್ಲಾನ್', ಕೇನ್ಸ್ ಪ್ಲಾನ್ ಎಂದೇ ಖ್ಯಾತವಾಗಿದೆ.

ಆದರೆ ಅಂದು ಬಹಳಷ್ಟು ವಾದವಿವಾದಕ್ಕೆ ಎಡೆಮಾಡಿಕೊಟ್ಟ ಈ ಪ್ರಶ್ನೆ ಇಂದು ಮಹತ್ವದ್ದೆನಿಸಿಲ್ಲ. ಡಾಲರಿನ ಮೌಲ್ಯ ಚಿನ್ನದ ಮೌಲ್ಯಕ್ಕೆ ತೆಕ್ಕೆ ಹಾಕಿಕೊಂಡಿದ್ದವರೆಗೆ ಸಹಜವಾಗಿಯೇ ವಿಶೇಷ ಡ್ರಾಯಿಂಗ್ ಹಕ್ಕಿನ ಮೌಲ್ಯವೂ ಚಿನ್ನದ ಮೌಲ್ಯವನ್ನು ಅವಲಂಬಿಸಿತ್ತು. ಹಲವಾರು ಪೆಟ್ಟುತಿಂದಬಳಿಕ ನಡೆದ ದೀರ್ಘ ಚಿಂತನೆಯ ಫಲವಾಗಿ ಡಾಲರು-ಚಿನ್ನ ಪರಸ್ಪರ ವಿಚ್ಛೇದ ಪಡೆದುಕೊಂಡಮೇಲೆ ವಿಶೇಷ ಡ್ರಾಯಿಂಗ್ ಹಕ್ಕಿನ ಸ್ವರೂಪಕ್ಕೆ ಹೊಸ ಕಳೆ ಬಂತು. ಕೇನ್ಸರ ವಾದಕ್ಕೆ ಜಯದೊರಕಿರುವುದು ಮಾನವ ಆರ್ಥಿಕರಂಗದಲ್ಲಿ ನವನಾಗರಿಕತೆಯತ್ತ ಮುನ್ನಡೆದಿರುವುದರ ಸಂಕೇತವೇ ಇದ್ದೀತು!

1981ರ ಜನವರಿ 1ರಂದು ವಿಶೇಷ ಡ್ರಾಯಿಂಗ್ ಹಕ್ಕಿನ ಮೌಲ್ಯವನ್ನು 16 ನಾಣ್ಯಗಳ ಮೌಲ್ಯವನ್ನಾಧರಿಸುವ ಬದಲು ಕೇವಲ 5 ನಾಣ್ಯಗಳನ್ನು ಆಧರಿಸಬೇಕೆಂದು ನಿರ್ಣಯ ಮಾಡಲಾಯಿತು. 1975ರಿಂದ 1979ರ ವರೆಗಿನ ಅವಧಿಯಲ್ಲಿ ಅತ್ಯಂತ ಹೆಚ್ಚು ಸರಕು ಮತ್ತು ಸೇವೆಗಳನ್ನು ರಫ್ತುಮಾಡಿದ ಐದು ಸದಸ್ಯರಾಷ್ಟ್ರಗಳ ನಾಣ್ಯಗಳ ಮೌಲ್ಯವನ್ನು ಆಧರಿಸಿ ವಿಶೇಷ ಡ್ರಾಯಿಂಗ್ ಹಕ್ಕಿನ ಮೌಲ್ಯವನ್ನು ನಿರ್ಧರಿಸತಕ್ಕದ್ದೆಂದು ತೀರ್ಮಾನವಾಯಿತು. ಎಂದರೆ ಬುಟ್ಟಿಯಲ್ಲಿದ್ದ ನಾಣ್ಯಗಳ ಸಂಖ್ಯೆ 16ರಿಂದ 5ಕ್ಕೆ ಇಳಿಯಿತು. ಅಮೆರಿಕನ್ ಡಾಲರು, ಡಾಯ್‌ಟ್ಷೆ ಮಾರ್ಕ್, ಫ್ರೆಂಚ್ ಫ್ರಾಂಕು, ಜಪಾನಿನ ಯೆನ್ ಮತ್ತು ಪೌಂಡ್ ಸ್ಟರ್ಲಿಂಗ್ ಇವೇ ಆ ಐದು ನಾಣ್ಯಗಳು.

1975–79ರ ಅವಧಿಯಲ್ಲಿನ ಅಂತರರಾಷ್ಟ್ರೀಯ

ವ್ಯಾಪಾರ ಮತ್ತು ಹಣಕಾಸು ವ್ಯವಹಾರದಲ್ಲಿ ಈ ನಾಣ್ಯಗಳಿಗಿರುವ ಪ್ರಾಮುಖ್ಯವನ್ನು ಆಧರಿಸಿ ವಿಶೇಷ ಡ್ರಾಯಿಂಗ್ ಹಕ್ಕಿನ ಘಟಕವೊಂದರಲ್ಲಿ ಈ ನಾಣ್ಯಗಳು ಎಷ್ಟೆಷ್ಟು ಪ್ರಮಾಣದಲ್ಲಿರಬೇಕೆಂದು ನಿರ್ಧರಿಸಲಾಯಿತು.

## ನಾಣ್ಯಗಳ ಹೊಸ ಬುಟ್ಟಿ

1980 ಡಿಸೆಂಬರ್ 31ರಂದು 16 ನಾಣ್ಯಗಳ ಮೌಲ್ಯದ ಆಧಾರದಮೇಲೆ ಲೆಕ್ಕಿಸಲಾದ ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕದ ಮೌಲ್ಯವೂ, 1981 ಜನವರಿ 1ರಂದು 5 ನಾಣ್ಯಗಳ ಮೌಲ್ಯದ ಆಧಾರದಮೇಲೆ ಲೆಕ್ಕಹಾಕಲಾದ ವಿ ಡ್ರಾ ಹಕ್ಕಿನ ಒಂದು ಘಟಕದ ಮೌಲ್ಯವೂ ಸಮನಾಗಿರುವಂತೆ ಎಚ್ಚರಿಕೆ ವಹಿಸಲಾಯಿತು.

'ಅಸಿಧಾರಾ ವ್ರತ'ಕ್ಕೆ ಸಮನಾದ ಈ ಲೆಕ್ಕಾಚಾರಗಳು ಮುಗಿದು ವಿ ಡ್ರಾ ಹಕ್ಕಿನ ಮೌಲ್ಯ ಈ ಮುಂದಿನಂತಿರಬೇಕೆಂದು ತೀರ್ಮಾನಿಸಲಾಯಿತು :

| ನಾಣ್ಯ | ವಿ ಡ್ರಾ ಹದ 1 ಘಟಕದ ಮೌಲ್ಯದಲ್ಲಿ ನಾಣ್ಯದ ಪ್ರಮಾಣ ಸೇ. | ನಾಣ್ಯದ ಇಷ್ಟಿಷ್ಟು ಅಂಶ ಸೇರಿ ವಿ ಡ್ರಾ ಹದ ಒಂದು ಘಟಕವಾಗಿದೆ |
|---|---|---|
| 1 ಅಮೆರಿಕದ ಡಾಲರ್ | 42 | 0.54 |
| 2 ಡ್ಯೂಷ್ ಮಾರ್ಕ್ | 19 | 0.46 |
| 3 ಫ್ರೆಂಚ್ ಫ್ರಾಂಕ್ | 13 | 0.74 |
| 4 ಜಪಾನ್ ಯೆನ್ | 13 | 34.00 |
| 5 ಪೌಂಡ್ ಸ್ಟರ್ಲಿಂಗ್ | 13 | 0.071 |
| ಮೊತ್ತ | 100 | |

ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕದಲ್ಲಿ ಯಾವ ಯಾವ ನಾಣ್ಯ ಎಷ್ಟೆಷ್ಟು ಪ್ರಮಾಣದಲ್ಲಿ ಸೇರಿದೆಯೆಂಬುದನ್ನು ಎರಡನೆಯ ಕಾಲಮಿನಲ್ಲಿ ತೋರಿಸಲಾಗಿದೆ. ಎಂದರೆ ವಿ.ಡ್ರಾ. ಹಕ್ಕಿನ ಸೇ. 42 ಭಾಗ ಅಮೆರಿಕನ್ ಡಾಲರ್, ಸೇ. 19 ಭಾಗ ಡಾಯ್‌ಟ್ಷೆ ಮಾರ್ಕ್, ಸೇ. 13 ಭಾಗ ಫ್ರೆಂಚ್ ಫ್ರಾಂಕ್, ಸೇ. 13 ಜಪಾನಿನ ಯೆನ್, ಸೇ. 12 ಪೌಂಡ್ ಸ್ಟರ್ಲಿಂಗ್ ಆಗಿರುತ್ತವೆ.

ವಿ ಡ್ರಾ ಹಕ್ಕಿನ ಒಂದು ಘಟಕದಲ್ಲಿ ನಾಣ್ಯವೊಂದು ಈ ಪ್ರಮಾಣದಲ್ಲಿರಬೇಕಾದರೆ ಆ ನಾಣ್ಯದ ಎಷ್ಟು ಭಾಗವನ್ನು ತೆಗೆದುಕೊಳ್ಳಬೇಕು ಎಂಬುದನ್ನು ಮೂರನೆಯ ಕಾಲಮಿನಲ್ಲಿ ತೋರಿಸಲಾಗಿದೆ.

ವಿ ಡ್ರಾ ಹಕ್ಕಿನಲ್ಲಿ 0.54 ಡಾಲರ್ ಅಮೆರಿಕ, 0.46 ಡಾಯ್‌ಟ್ಷೆ ಮಾರ್ಕ್, 0.74 ಫ್ರೆಂಚ್ ಫ್ರಾಂಕ್, 34 ಜಪಾನಿನ ಯೆನ್‌ಗಳು ಮತ್ತು 0.071 ಪೌಂಡ್ ಸ್ಟರ್ಲಿಂಗ್ ಇರುತ್ತವೆ. ಇಲ್ಲಿ ಜಪಾನಿನ ಯೆನ್‌ಗಳು 34 ಇದ್ದರೂ ವಿ.ಡ್ರಾ. ಹಕ್ಕಿನ ಘಟಕದಲ್ಲಿ ಅದರ ಪ್ರಮಾಣ ಸೇ. 13 ಮಾತ್ರ. ಏಕೆಂದರೆ 'ಯೆನ್' ಎಂಬ ನಾಣ್ಯ ಘಟಕದ ಮೌಲ್ಯ ಕಿರಿದು. ಅದೇ ರೀತಿ ವಿ.ಡ್ರಾ ಹದಲ್ಲಿ ಸೇ. 13 ಭಾಗ ಹೊಂದಿರುವ 'ಪೌಂಡ್ ಸ್ಟರ್ಲಿಂಗ್'ನ ಮೌಲ್ಯ ಅಧಿಕವಾದುದರಿಂದ ಕೇವಲ 0.071 ಪೌಂಡ್ ಸ್ಟರ್ಲಿಂಗ್ ವಿ.ಡ್ರಾ ಹದ ಒಂದು ಘಟಕದಲ್ಲಿರುತ್ತದೆ.

ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕ

= 0.54 ಡಾಲರ್
+ 0.46 ಡಾಯ್‌ಟ್ಷೆ ಮಾರ್ಕ್
+ 0.74 ಫ್ರೆಂಚ್ ಫ್ರಾಂಕ್
+ 34 ಜಪಾನಿ ಯೆನ್
+ 0.071 ಪೌಂಡ್ ಸ್ಟರ್ಲಿಂಗ್

ವಿ.ಡ್ರಾ ಹದ ಒಂದು ಘಟಕದ ಮೌಲ್ಯವನ್ನು ಡಾಲರುಗಳಲ್ಲೇ ಹೇಳಬೇಕಾದರೆ ಈ ಸಮೀಕರಣದಲ್ಲಿ ಉಳಿದ ನಾಣ್ಯಗಳನ್ನು ಪ್ರಸ್ತುತ ದರಗಳಲ್ಲಿ ಡಾಲರಿಗೆ ಪರಿವರ್ತಿಸಿಕೊಳ್ಳಬೇಕಾಗುತ್ತದೆ.

## ವಿನಿಮಯ ಸ್ಥಿರತೆ

ವಿಶೇಷ ಡ್ರಾಯಿಂಗ್ ಹಕ್ಕಿನ ಮೌಲ್ಯನಿರ್ಧಾರಣ ಕ್ಲಿಷ್ಟವಾದುದು. ವಿ.ಡ್ರಾ. ಹಕ್ಕಿನ ಸ್ವರೂಪವೇ ಹಾಗೆ. ಹಾಗಾದರೆ ಯಾವ ಸಿದ್ಧಿಗಾಗಿ ಈ ಪುರುಷಾಮೃಗದ ಸೃಷ್ಟಿ? ಎಂಬ ಪ್ರಶ್ನೆಗೆ ಉತ್ತೇಜಕವಾದ ಉತ್ತರವಿದೆ. ಈ ಮೊದಲು ವಿವರಿಸಿದಂತೆ ವಿಶ್ವಮಾರುಕಟ್ಟೆಯಲ್ಲಿ ಯಾವ ಒಂದು ನಾಣ್ಯದ ಮೌಲ್ಯವೂ ಸ್ಥಿರವಾಗಿಲ್ಲದಿರುವುದರಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ ಅಂತಹ ನಾಣ್ಯಗಳಲ್ಲಿ ವ್ಯವಹರಿಸುವ ರಾಷ್ಟ್ರಗಳಿಗೆ ವಿನಿಮಯ ನಷ್ಟದ ಭೀತಿ ಇತ್ತು; ಆದರೆ ವಿಶೇಷ ಡ್ರಾಯಿಂಗ್ ಹಕ್ಕುಗಳ ಮೌಲ್ಯದಲ್ಲಿ ಸಾಕಷ್ಟು ಸ್ಥಿರತೆ ಕಂಡುಬರುತ್ತದೆ. ಏಕೆಂದರೆ ವಿಶ್ವಮಾರುಕಟ್ಟೆಯಲ್ಲಿ ಒಂದು ಪ್ರಮುಖ ನಾಣ್ಯದ ಮೌಲ್ಯ ಏರಿದಾಗ ಮುಂಚೂಣಿಯಲ್ಲಿರುವ ಉಳಿದ ಹಲವು ನಾಣ್ಯಗಳ ಮೌಲ್ಯ ಸ್ವಲ್ಪವಾದರೂ ತಗ್ಗುತ್ತದೆ. ಹೀಗಾಗಿ ವಿ.ಡ್ರಾ. ಹಕ್ಕಿನ ಮೌಲ್ಯದಲ್ಲಿ ಹೆಚ್ಚಿನ ಏರುಪೇರಾಗುವ ಸಂಭವ ಕಡಮೆ. ಅದೇ ರೀತಿ ಪ್ರಮುಖ ನಾಣ್ಯವೊಂದರ ಮೌಲ್ಯ ಗಣನೀಯವಾಗಿ ತಗ್ಗಿದಾಗ ಉಳಿದ ನಾಣ್ಯಗಳಲ್ಲಿ ಹಲವುದರ ಮೌಲ್ಯವು ಏರುವ ಸಂಭವಗಳಿರುತ್ತವೆ. ಹೀಗಾಗಿ, ವಿನಿಮಯ ಸ್ಥಿರತೆಯ ಸಾಧನೆ ವಿಶೇಷ ಡ್ರಾಯಿಂಗ್ ಹಕ್ಕಿನಿಂದ ಬಹುಮಟ್ಟಿಗೆ ಸಾಧ್ಯವಾಗಿದೆ.

ಆದರೆ ವಿಶೇಷ ಡ್ರಾಯಿಂಗ್ ಹಕ್ಕಿನ ಒಂದು ಘಟಕದಲ್ಲಿರಬೇಕಾದ ವಿವಿಧ ನಾಣ್ಯಗಳ ಪ್ರಮಾಣದಲ್ಲಿ ಮೇಲಿನದೇ ಕೊನೆಯ ಮಾತು ಎನ್ನುವಂತಿಲ್ಲ. ಏಕೆಂದರೆ 'ಪ್ರತಿ ಐದು ವರ್ಷಗಳಿಗೊಮ್ಮೆ ಕಾರ್ಯನಿರ್ವಾಹಕ ಮಂಡಲಿ ಅನ್ಯಥಾ ತೀರ್ಮಾನಿಸದಿದ್ದಲ್ಲಿ ಈ ಪ್ರಮಾಣಗಳಲ್ಲಿ ಹೊಂದಾಣಿಕೆ ಮಾಡಲಾಗುತ್ತದೆ' ಎಂದು ಆಗಲೇ ನಿರ್ಣಯವಾಗಿದೆ!

1986ರ ಜನವರಿ 1ರಂದು ಮುಂದಿನ ಹೊಂದಾಣಿಕೆ

ನಡೆಯುವಾಗ 1980–84ರ ಅವಧಿಯ ವಿಶ್ವವ್ಯಾಪಾರದಲ್ಲಿ ಮುಂಚೂಣಿಯಲ್ಲಿರುವ ಐದು ನಾಣ್ಯಗಳನ್ನು ಆಯ್ಕೆಮಾಡಿ ಅವುಗಳ ಆಧಾರದಮೇಲೆ ವಿಡ್ರಾ ಹದ ಮೌಲ್ಯವನ್ನು ನಿರ್ಧರಿಸಲಾಗುವುದು.

ವಿಶೇಷ ಡ್ರಾಯಿಂಗ್ ಹಕ್ಕಿನ ಪರಿಕಲ್ಪನೆಯ ಹಿನ್ನೆಲೆಯಲ್ಲಿ ವಿನಿಮಯ ಸ್ಥಿರತೆ ಸಾಧನೆಯ ಉದ್ದೇಶವಿರುವುದರಿಂದ 'ಬುಟ್ಟಿ'ಯಲ್ಲಿರುವ ನಾಣ್ಯಗಳ ಮೌಲ್ಯ ಹೆಚ್ಚು ವ್ಯತ್ಯಾಸಗೊಳ್ಳದಂತೆ ಎಚ್ಚರ ವಹಿಸಬೇಕಾದುದು ಅಗತ್ಯ. ಆದ್ದರಿಂದ ಈ ನಾಣ್ಯಗಳ ಮೌಲ್ಯಗಳಲ್ಲಿ ಶೇ. 1.5ಕ್ಕಿಂತ ಹೆಚ್ಚಿನ ವ್ಯತ್ಯಾಸವಾಗದಂತೆ ಎಚ್ಚರ ವಹಿಸಲಾಗುವುದು.

ಈಗ ವಿಶೇಷ ಡ್ರಾಯಿಂಗ್ ಹಕ್ಕಿನ ಮೌಲ್ಯನಿರ್ಧಾರಕ್ಕೆ ಬೇಕಾದ ಎಲ್ಲ ದರಗಳೂ ಲಂಡನ್ ಮಾರುಕಟ್ಟೆಯಲ್ಲೇ ದೊರೆಯುವಂತಾಗಿದೆ. ನಾಣ್ಯಗಳ ಬುಟ್ಟಿಯ ಬದಲಾವಣೆಗೆ ಮುನ್ನ ಜಪಾನಿನ ಯೆನ್‌ನ ಡಾಲರ್ ದರವನ್ನು ಟೋಕಿಯೊ ಮಾರುಕಟ್ಟೆಯಲ್ಲಿ ತೆಗೆದುಕೊಳ್ಳಲಾಗುತ್ತಿತ್ತು. ಈಗ ಅದನ್ನು ಲಂಡನ್ ಮಾರುಕಟ್ಟೆಯಲ್ಲಿಯೇ ತೆಗೆದುಕೊಳ್ಳಬಹುದೆಂದು ತೀರ್ಮಾನವಾಗಿದೆ. ಈ ತಾಂತ್ರಿಕ ಅಂಶದಲ್ಲಿ ಮಾಡಿದ ಬದಲಾವಣೆ ವಿಡ್ರಾಹಗಳಲ್ಲಿ ವ್ಯವಹರಿಸುವವರಿಗೆ ಅನುಕೂಲವನ್ನುಂಟುಮಾಡಿದೆ.

## ದ್ರವತ್ವದ ಹೆಚ್ಚಳ

ಅಂತರರಾಷ್ಟ್ರೀಯ ಹಣನಿಧಿಯ ಸದಸ್ಯರಾಷ್ಟ್ರಗಳ ಪೈಕಿ ಅಭಿವೃದ್ಧಿಶೀಲ ರಾಷ್ಟ್ರಗಳೆನಿಸಿಕೊಂಡ ಅನೇಕ ರಾಷ್ಟ್ರಗಳು ವಿವಿಧ ರೀತಿಯ ಆರ್ಥಿಕ ಸಂಕಷ್ಟಗಳ ಪರಿಹಾರಕ್ಕೆ ನಿಧಿಯಿಂದ ನೆರವು ಪಡೆದುವು. ಈ ನೆರವಿನ ಗಣನೀಯ ಭಾಗ ವಿಶೇಷ ಡ್ರಾಯಿಂಗ್ ಹಕ್ಕುಗಳ ರೂಪದಲ್ಲಿ ಬಂದಿದೆಯೆಂಬುದು ಗಮನಾರ್ಹವಾಗಿದೆ.

ವಿಶೇಷ ಡ್ರಾಯಿಂಗ್ ಹಕ್ಕಿನ ಪ್ರಪ್ರಥಮ ಹಂಚಿಕೆ (ಅಲೊಕೇಷನ್) 1970ರ ಜನವರಿ 1ರಂದು ನಡೆಯಿತು. 104 ಸದಸ್ಯರಾಷ್ಟ್ರಗಳಿಗೆ 3,414 ದಶಲಕ್ಷ ಅಮೆರಿಕನ್ ಡಾಲರುಗಳಷ್ಟು ಮೌಲ್ಯದ ವಿಶೇಷ ಡ್ರಾಯಿಂಗ್ ಹಕ್ಕುಗಳನ್ನು ನಿಧಿ ಹಂಚಿತು. ಮುಂದೆ 1971ರಲ್ಲಿ 2,949 ದಶಲಕ್ಷ ಡಾಲರುಗಳಷ್ಟು ಮೌಲ್ಯದ ವಿಡ್ರಾಹಗಳನ್ನು ಬಿಡುಗಡೆ ಮಾಡಲಾಯಿತು. 1972ರಲ್ಲಿಯೂ ಸುಮಾರು 3,000 ದಶಲಕ್ಷ ಡಾಲರುಗಳನ್ನು ನಿಧಿಯ ಸದಸ್ಯರಾಷ್ಟ್ರಗಳು ಪಡೆದುವು.

ಇತ್ತೀಚೆಗೆ 1981ರ ಜನವರಿ 1ರಂದು ನಿಧಿ ತನ್ನ 141 ಸದಸ್ಯರಾಷ್ಟ್ರಗಳಿಗೆ 4,050 ದಶಲಕ್ಷ ವಿ.ಡ್ರಾ. ಹಗಳನ್ನು ಹಂಚಿತು. 1979ರಿಂದ 1981ರ ವರೆಗಿನ ಮೂರು ವರ್ಷಗಳ ಅವಧಿಯಲ್ಲಿ ವರ್ಷಕ್ಕೆ ಸರಾಸರಿ 4,000 ದಶಲಕ್ಷ ವಿ ಡ್ರಾ ಹಗಳನ್ನು ಹಂಚಬೇಕೆಂದು ರಾಷ್ಟ್ರಪ್ರತಿನಿಧಿಗಳ ಮಂಡಳಿಯಲ್ಲಿ ನಿರ್ಣಯಿಸಲಾಗಿತ್ತು. ಆ ನಿರ್ಣಯದಂತೆ ಬಿಡುಗಡೆ ಮಾಡಲಾದ ಮೂರನೆಯ ಹಾಗೂ ಕೊನೆಯ ಕಂತು ಇದು.

1971–72ರ ತ್ರೈವಾರ್ಷಿಕ ಅವಧಿಯಲ್ಲಿ ಹಂಚಿದ 9,300 ದಶಲಕ್ಷ ವಿಡ್ರಾಹಗಳೂ ಸೇರಿ ಈಗ ವಿಶ್ವಮಾರುಕಟ್ಟೆಯಲ್ಲಿ 21,000 ದಶಲಕ್ಷಕ್ಕೂ ಹೆಚ್ಚು ಮೊತ್ತದ ವಿಡ್ರಾಹಗಳು ಚಲಾವಣೆಯಲ್ಲಿವೆ. ಇದರ ಮೌಲ್ಯ ಸುಮಾರು 27,000 ದಶಲಕ್ಷ ಅಮೆರಿಕನ್ ಡಾಲರ್‌ಗಿಂತ (ಅಥವಾ 25,920 ಕೋಟಿ ರೂಪಾಯಿ) ಅಧಿಕವಾಗುತ್ತದೆ ಎಂದರೆ ದ್ರವತ್ವದ ಹೆಚ್ಚಳದಲ್ಲಿ ವಿಡ್ರಾಹದ ಪಾತ್ರದ ಮಹತ್ವದ ಅರಿವಾಗುತ್ತದೆ.

ಸದಸ್ಯರಾಷ್ಟ್ರಗಳು ನಿಧಿಗೆ ನಿರ್ದಿಷ್ಟಪ್ರಮಾಣದ ವಂತಿಗೆಯನ್ನು ನೀಡಬೇಕಾಗಿದ್ದು, ಈ ವಂತಿಗೆಯ ಗಾತ್ರವನ್ನು ಇತ್ತೀಚೆಗೆ ಪುನರ್ವಿಮರ್ಶಿಸಲಾಯಿತು. ಅಧಿಕಗೊಂಡ ಹಸುಗೆಗಳಲ್ಲಿ (ಕೋಟಾ) ಸೇ. 25ರಷ್ಟನ್ನು ಸದಸ್ಯರಾಷ್ಟ್ರಗಳು ವಿಶೇಷ ಡ್ರಾಯಿಂಗ್ ಹಕ್ಕುಗಳ ರೂಪದಲ್ಲಿ ನೀಡಬೇಕೆಂಬುದು ನಿಧಿಯ ತಾಕೀತು. ಈ ಕೋಟಾ ಏರಿಕೆಯಿಂದ ಸದಸ್ಯರಾಷ್ಟ್ರಗಳಿಗೆ ಲಾಭವಿಲ್ಲದಿಲ್ಲ. ಪ್ರತಿವರ್ಷ (ಪುನರ್ವಿಮರ್ಶಿತ)ತಮ್ಮ ಕೋಟಾದ 1½ಯಷ್ಟು ಮೊತ್ತವನ್ನಾಗಲೀ ತ್ರೈವಾರ್ಷಿಕವಾಗಿ ಕೋಟಾದ 4½ಯಷ್ಟು ಮೊತ್ತವನ್ನಾಗಲೀ ನಿಧಿಯಿಂದ ಸಾಲ ಪಡೆಯಬಹುದಾದುದರಿಂದ ಸದಸ್ಯರಾಷ್ಟ್ರಗಳಿಗೆ ಅನುಕೂಲವಾಗಿದೆ. ಪ್ರಸ್ತುತ ಕೋಟಾ ಏರಿಕೆಗೆ ಮುನ್ನ ಸದಸ್ಯರಾಷ್ಟ್ರಗಳು ಪಡೆಯಬಹುದಾದ ಸಾಲದ ಮೊತ್ತ (ವರ್ಷದಲ್ಲಿ) ಕೋಟಾದ 2ರಷ್ಟು ಹಾಗೂ (3 ವರ್ಷಗಳಲ್ಲಿ) ಕೋಟಾದ 6ರಷ್ಟು ಇದ್ದರೂ, ಕೋಟಾಗಳಲ್ಲಿನ ಏರಿಕೆ ಗಣನೀಯವಾಗಿರುವುದರಿಂದ (ಸರಾಸರಿ ಸೇ. 50) ಸದಸ್ಯರಾಷ್ಟ್ರಗಳು ಹೆಚ್ಚು ಸಾಲ ಪಡೆಯಲು ಅವಕಾಶ ಇದೆ. ಲೆಕ್ಕಹಾಕಿ ನೋಡಿದರೆ, ಸದಸ್ಯರಾಷ್ಟ್ರಗಳಿಗೆ ಈ ಮೊದಲು ದೊರೆಯಬಹುದಾಗಿದ್ದ ವಾರ್ಷಿಕ ಸಾಲದ ಮೊತ್ತ ಹೊಸ ಕೋಟಾದ 1⅓ಯಷ್ಟು ಮಾತ್ರ ಆಗುತ್ತದೆ. ಈಗ ಅದು 1½ಯಷ್ಟು ಆಗಿರುವುದರಿಂದ ಸದಸ್ಯರಾಷ್ಟ್ರಗಳಿಗೆ ನಿಧಿಯ ನೆರವು ಶೇ. 12½ಯಷ್ಟು ಏರಿದಂತಾಗುತ್ತದೆ. ವಿಶೇಷ ಡ್ರಾಯಿಂಗ್ ಹಕ್ಕುಗಳ 'ಸೃಷ್ಟಿ' ಸಾಧ್ಯವಾಗಿರುವುದರಿಂದ ನಿಧಿ ಈ ಹೆಚ್ಚಿನ ಜವಾಬ್ದಾರಿಯನ್ನು ನಿರ್ವಹಿಸಬಹುದಾಗಿದೆ.

ಅಂತರರಾಷ್ಟ್ರೀಯ ವ್ಯವಹಾರದಲ್ಲಿ ವಿಶೇಷ ಡ್ರಾಯಿಂಗ್ ಹಕ್ಕುಗಳ ಬಳಕೆಗೆ ಹಿಂದೆಯೇ ಸಾಕಷ್ಟು ಅವಕಾಶಗಳಿದ್ದರೂ ಕಳೆದ ಎರಡು ವರ್ಷಗಳಿಂದ ಅವುಗಳಿಗೆ ಇನ್ನೂ ಮುಕ್ತ ಅವಕಾಶಗಳನ್ನು ಕಲ್ಪಿಸಲಾಗಿದೆ.

ಈಗ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ :

1 ಅವುಗಳನ್ನು ತತ್‌ಕ್ಷಣ (ಸ್ಪಾಟ್) ಮತ್ತು ಮುಂಗಡ (ಫಾರ್ವರ್ಡ್)ವಾಗಿ ಮಾರಬಹುದು/ಕೊಳ್ಳಬಹುದು.

2 ವಿಡ್ರಾಹಗಳ ರೂಪದಲ್ಲಿ ಸಾಲವನ್ನೂ, ಅನುದಾನಗಳನ್ನೂ (ಗ್ರ್ಯಾಂಟ್) ನೀಡಬಹುದು.

3 ವಿಡ್ರಾಹಗಳಲ್ಲಿ ಬದಲೀ ವ್ಯವಹಾರ (ಸ್ವಾಪ್) ನಡೆಸಬಹುದು.

4 ವಿಡ್ರಾಹಗಳನ್ನು ಒತ್ತೆಯಿಡಬಹುದು.

ಇಂಥ ವ್ಯವಹಾರಗಳಲ್ಲಿನ ನಿಯಮನಿಬಂಧನೆಗಳನ್ನು ಪಕ್ಷಿಗಳ ನಡುವಿನ ಒಪ್ಪಂದದಿಂದ ಮಾಡಿಕೊಳ್ಳಬಹುದು; ಆದರೆ ವಿಡ್ರಾ ಹಕ್ಕಿನ ಅಧಿಕೃತ (ತತ್‌ಕ್ಷಣದ) ಮೌಲ್ಯ ನಿರ್ಧಾರಣ ಕ್ರಮವನ್ನು ಕಡೆಗಣಿಸುವಂತಿಲ್ಲ.

ಸದಸ್ಯರಾಷ್ಟ್ರಗಳಲ್ಲದೆ ಇತರ ಎಂಟು ಸಂಸ್ಥೆಗಳು ವಿಡ್ರಾಹಗಳನ್ನು ಹೊಂದಿರಲು 1980ರಲ್ಲಿ ನಿಧಿ ಅನುಮತಿ ನೀಡಿತು. ಈ ಸಂಸ್ಥೆಗಳು ವಿಶೇಷ ಡ್ರಾಯಿಂಗ್ ಹಕ್ಕುಗಳನ್ನು ಅಧಿಕೃತವಾಗಿ ಪಡೆಯಬಹುದು, ಹೊಂದಿರಬಹುದು ಮತ್ತು ಉಪಯೋಗಿಸಬಹುದು.

1 ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ (IDA)
2 ಅಂತರರಾಷ್ಟ್ರೀಯ ಪುನರ್ನಿಮಾಣ ಮತ್ತು ಅಭಿವೃದ್ಧಿ ಬ್ಯಾಂಕ್ (ವಿಶ್ವಬ್ಯಾಂಕ್) (IBRD)
3 ಅಂತರರಾಷ್ಟ್ರೀಯ ಕೃಷಿ ಅಭಿವೃದ್ಧಿ ಬ್ಯಾಂಕ್ (IFAD)
4 ಸ್ವಿಸ್ ರಾಷ್ಟ್ರೀಯ ಬ್ಯಾಂಕ್
5 ಆಂಡಿಯನ್ ಮೀಸಲು ನಿಧಿ, ಬಗೋಟ
6 ಅರಬ್ ಹಣ ನಿಧಿ, ಅಬು ಧಾಭಿ
7 ನಾರ್ಡಿಕ್ ವಿನಿಯೋಜನ ಬ್ಯಾಂಕ್
8 ಪೂರ್ವ ಕ್ಯಾರಿಬೀಯನ್ ನಾಣ್ಯ ಪ್ರಾಧಿಕಾರ
9 ಅಂತರರಾಷ್ಟ್ರೀಯ ಇತ್ಯರ್ಥ ಬ್ಯಾಂಕ್

ಈ ಸಂಸ್ಥೆಗಳು ವಿಡ್ರಾಹದ ಇತರ ಅಧಿಕೃತ ಧಾರಕರು. ಹೀಗೆ ಇತರ ಸಂಸ್ಥೆಗಳು ವಿಡ್ರಾಹದ ಅಧಿಕೃತ ಧಾರಕರಾಗಿರುವುದರಿಂದ ವಿಡ್ರಾಹಗಳಲ್ಲಿ ಅಂತರರಾಷ್ಟ್ರೀಯ ಸಾಲಗಳನ್ನು ಒಗ್ಗೂಡಿಸಬಹುದು. ಇದರಿಂದ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅಧಿಕಗಾತ್ರದ ಮೊತ್ತಗಳನ್ನು ಸಾಲಪಡೆಯುವ ಸಂಸ್ಥೆಗಳು ಎದುರಿಸಬೇಕಾದ ನಷ್ಟಸಂಭವ ನಿವಾರಣೆಯಾಗುತ್ತದೆ. ವಿಡ್ರಾಹಗಳ ಮೌಲ್ಯ ಡಾಲರ್ ಮತ್ತಿತರ ನಾಣ್ಯಗಳ ಮೌಲ್ಯದಂತೆ ಅಸ್ಥಿರವಲ್ಲವಷ್ಟೆ? ವಿಶೇಷ ಡ್ರಾಯಿಂಗ್ ಹಕ್ಕುಗಳ ವ್ಯಾಪ್ತಿ ಕ್ರಮೇಣ ವಿಸ್ತರಿಸುತ್ತಿದ್ದು ವಿಶ್ವಮಾರುಕಟ್ಟೆಯಲ್ಲಿ ಅದರ ಪಾತ್ರಕ್ಕೆ ರಂಗೇರುತ್ತಿದೆ.

ದ್ರವತ್ವದ ಕೊರತೆಯನ್ನು ಪರಿಹರಿಸುವ ಸಲುವಾಗಿ ವಿಶ್ವಮಾರುಕಟ್ಟೆಯಲ್ಲಿ ಪದಾರ್ಪಣ ಮಾಡಿದಾಗ ಸಂಶಯ ದೃಷ್ಟಿಗೆ ಗುರಿಯಾದ ವಿಶೇಷ ಡ್ರಾಯಿಂಗ್ ಹಕ್ಕು ಇಂದು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ.

---

ಆಯಾ ಜಿಲ್ಲೆಗಳಲ್ಲಿ ಪ್ರಮುಖ ಬ್ಯಾಂಕುಗಳು ಆ ಜಿಲ್ಲೆಗಳಲ್ಲಿ ಸ್ಥಾಪಿಸಬಹುದಾದ ಉದ್ಯಮಾವಕಾಶಗಳನ್ನು ಗುರ್ತಿಸಿ, ಒದಗಿಸಬಹುದಾದ ಸಾಲ ಸೌಲಭ್ಯ ಹಾಗೂ ಸಾಲ ನೀಡಿಕೆಯ ಯೋಜನೆಗಳನ್ನು ರೂಪಿಸುವುದು ಪ್ರಮುಖ ಅಂಶ. ಇತರ ಹಣಕಾಸು ಸಂಸ್ಥೆಗಳು ಸಾಲ ನೀಡುವಾಗ ಮಾರ್ಗದರ್ಶನ ನೀಡಲು ಇದು ಸಹಾಯವಾಗುತ್ತದೆ.

ಗ್ರಾಮ ಪ್ರದೇಶಗಳ ಅತಿ ಸಣ್ಣ ಹಾಗೂ ಕುಟೀರ ಕೈಗಾರಿಕೆಗಳಿಗೆ ನೆರವು ನೀಡಲು ಸ್ಥಾಪಿತವಾಗಿರುವ ಖಾದಿ ಗ್ರಾಮೋದ್ಯೋಗ ಮಂಡಳಿಯೂ ಈ ದಿಸೆಯಲ್ಲಿ ಹೆಚ್ಚು ಉತ್ತೇಜನಕಾರಿಯಾಗಿದೆ. ಸರಕನ್ನು ಮಾರಾಟ ಮಾಡುವಲ್ಲಿಯೂ ಈ ಮಂಡಳಿ ತಕ್ಕ ವ್ಯವಸ್ಥೆ ಮಾಡುತ್ತಿದೆ.

### ರಾಜ್ಯ ಹಣಕಾಸು ಸಂಸ್ಥೆ

ರಾಜ್ಯ ಹಣಕಾಸು ಸಂಸ್ಥೆಯೂ ಸಮಾಜದ ದುರ್ಬಲ ವರ್ಗದವರಿಗೆ, ಅನುಸೂಚಿತ ಜಾತಿ, ವರ್ಗ ಹಾಗೂ ಹಿಂದುಳಿದ ವರ್ಗಗಳ ಉದ್ಯಮಿಗಳಿಗೆ, ಕೈಕಸಬುದಾರರಿಗೆ, ಕುಶಲ ಕರ್ಮಿಗಳಿಗೆ ಅಗತ್ಯವಾದ ಆರ್ಥಿಕ ನೆರವನ್ನು ಒದಗಿಸುವಲ್ಲಿ ಇತ್ತೀಚಿನ ವರ್ಷಗಳಲ್ಲಿ ವಿಶೇಷ ಗಮನ ವಹಿಸುತ್ತಿದೆ. ಈ ಉದ್ಯಮಿಗಳಿಗೆ ವಿಶೇಷಯೋಜನೆಗಳನ್ನು ರೂಪಿಸಲಾಗಿದೆ. ಸಂಯುಕ್ತ ಸಾಲ ಯೋಜನೆಯನ್ವಯ ಸಂಸ್ಥೆ 1982ರ ಡಿಸೆಂಬರ್ ಅಂತ್ಯದ ವರೆಗೆ 452 ಸಾಲಗಳಿಗೆ ಒಟ್ಟು 32,42 ಲಕ್ಷ ರೂ.ಗಳನ್ನು ನೀಡಿದೆ. ಅಲ್ಲದೆ ಪರಿಶಿಷ್ಟ ಜಾತಿ, ವರ್ಗ, ಹಿಂದುಳಿದ ವರ್ಗದ ಯೋಜನೆಯಂತೆ 550 ಜನರು 581.26 ಲಕ್ಷ ರೂ.ಗಳನ್ನು ಪಡೆದುಕೊಂಡಿದ್ದಾರೆ. ಈ ಯೋಜನೆಯನ್ವಯ ಬಡ್ಡಿ ದರದಲ್ಲಿ ಸೇ. ಒಂದರಷ್ಟು ವಿನಾಯಿತಿ ನೀಡುವುದರ ಜೊತೆಗೆ ಆದ್ಯತೆಯನ್ನು ನೀಡಲಾಗುವುದು.

ಧಾರವಾಡ, ರಾಯಚೂರು, ಬೆಳಗಾಂ ಮುಂತಾದ ಜಿಲ್ಲೆಗಳ 251 ಜನ ನೇಕಾರರಿಗೆ ರೂ. 2,82 ಲಕ್ಷ ನೆರವನ್ನು ಕಚ್ಚಾ ವಸ್ತು ಹಾಗೂ ಮಗ್ಗಗಳನ್ನು ಪಡೆಯಲು ಸಂಸ್ಥೆ ನೀಡಿದೆ. ಇದಲ್ಲದೆ ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿರುವ ನೇಕಾರರೂ ಆರ್ಥಿಕ ನೆರವನ್ನು ಪಡೆಯುತ್ತಿದ್ದಾರೆ. ಇದೇ ರೀತಿ ದರ್ಜಿಗಳಿಗೂ ಚರ್ಮದ ಕೆಲಸಗಾರರಿಗೂ ಅಂಗವಿಕಲ ಉದ್ಯಮಿಗಳಿಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ. ಅಲ್ಲದೆ ಸಂಸ್ಥೆ ಒಂದು ಗ್ರಾಮದ ಸರ್ವಾಂಗೀಣ ಅಭಿವೃದ್ಧಿಗಾಗಿ ಧಾರವಾಡ ಜಿಲ್ಲೆಯ 'ಅದರಗುಂಚಿ' ಎಂಬ ಗ್ರಾಮವೊಂದನ್ನು ಮೊದಲ ಬಾರಿಗೆ ದತ್ತು ಸ್ವೀಕರಿಸಿ ಆ ಗ್ರಾಮದ 12 ಜನ ಉದ್ಯಮಿಗಳಿಗೆ ಅಗತ್ಯವಾದ ಸುಮಾರು ರೂ. 1,56,000 ಸಾಲ ಸೌಲಭ್ಯವನ್ನು ಒದಗಿಸಿದೆ.

ರಾಜ್ಯ ಹಣಕಾಸು ಸಂಸ್ಥೆಗಳ ಅಧಿನಿಯಮದ ಅನ್ವಯ 'ಕೈಗಾರಿಕೆ' ಎಂದು ಪರಿಗಣಿತವಾದ ಕ್ಷೇತ್ರಗಳಿಗೆ ಮಾತ್ರ ರಾಜ್ಯ ಹಣಕಾಸು ಸಂಸ್ಥೆ ಸಾಲ ನೀಡಬಲ್ಲುದು. ಈ ಅಧಿನಿಯಮದ ವ್ಯಾಪ್ತಿಯಲ್ಲಿ ವಾಣಿಜ್ಯ ವ್ಯವಹಾರ, ಕೃಷಿ, ಹೈನುಗಾರಿಕೆಗಳು ಬರದಿರುವುದರಿಂದ ಈ ಕ್ಷೇತ್ರಗಳಿಗೆ ಸಂಸ್ಥೆ ಸಾಲ ನೀಡುವಂತಿಲ್ಲ.

ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಉಪ ಕಸಬುಗಳು ಗ್ರಾಮ ಸಮಾಜದ ಜೀವಾಳವಾಗಿವೆ. ಅವುಗಳ ಬೆಳವಣಿಗೆಯಲ್ಲಿ ಬ್ಯಾಂಕುಗಳ ಪಾತ್ರ ಅತಿ ಮಹತ್ವದ್ದಾಗಿದೆ. ಬ್ಯಾಂಕುಗಳು ಗ್ರಾಮ ಪ್ರದೇಶದಲ್ಲಿ ಹೆಚ್ಚು ಸಂಖ್ಯೆಯ ಶಾಖೆಗಳನ್ನು ಹೊಂದಿರುವುದರಿಂದ ಅವು ಈ ದಿಸೆಯಲ್ಲಿ ತಮ್ಮ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಬಹುದಾಗಿದೆ.

### ಜಿಲ್ಲಾ ಕೈಗಾರಿಕಾ ಕೇಂದ್ರ

ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿಸಲು ಸಾಧ್ಯತೆ ಇರುವ ಉದ್ಯಮಗಳನ್ನು ಗುರ್ತಿಸಿ, ಸಣ್ಣ ಅತಿ ಸಣ್ಣ ಉದ್ಯಮಿಗಳಿಗೆ ಅಗತ್ಯವಾದ ಮಾಹಿತಿಯನ್ನು ಒದಗಿಸಿ ಗ್ರಾಮ ಪ್ರದೇಶದ ಸಂಪನ್ಮೂಲಗಳನ್ನು ಸಮರ್ಥ ರೀತಿಯಲ್ಲಿ ಬಳಸಿಕೊಳ್ಳಲು ಜಿಲ್ಲಾ ಕೈಗಾರಿಕಾ ಕೇಂದ್ರಗಳು ಶ್ರಮಿಸುತ್ತಿವೆ. ಈ ಕೇಂದ್ರಗಳು ಉದ್ಯಮಾವಕಾಶಗಳನ್ನು ಗುರ್ತಿಸಿ ಮಾಹಿತಿ ನೀಡುವುದರ ಜೊತೆಗೆ ಉದ್ಯಮಿಗಳಿಗೆ ಉದ್ಯಮದಲ್ಲಿ ತೊಡಗಲು ಪ್ರೋತ್ಸಾಹಿಸುತ್ತಿವೆ. ಈ ಹಿನ್ನೆಲೆಯಲ್ಲಿ ಬ್ಯಾಂಕುಗಳು, ಇತರ ಹಣಕಾಸು ಸಂಸ್ಥೆಗಳು ಯೋಗ್ಯ ಉದ್ಯಮಿಗಳಿಗೆ ಹಣಕಾಸಿನ ನೆರವನ್ನು ನೀಡಬೇಕು. ಜೊತೆಗೆ ಗ್ರಾಮೀಣ ಉದ್ಯಮಿಗಳು ಹೊಸ ತಂತ್ರಜ್ಞಾನದ ಬಳಕೆಯಿಂದ ವಿಶಿಷ್ಟ ವಸ್ತುಗಳನ್ನು ತಯಾರಿಸಲು ಮುಂದೆ ಬರಬೇಕು.

ಬ್ಯಾಂಕು ಹಾಗೂ ಹಣಕಾಸು ಸಂಸ್ಥೆಗಳು ಇನ್ನೂ ಹೆಚ್ಚು ಸಂಖ್ಯೆಯ ಶಾಖೆಗಳನ್ನು ಗ್ರಾಮ ಪ್ರದೇಶಗಳ ಅಭಿವೃದ್ಧಿಗೆ ಸಹಾಯಕವಾಗುವ ರೀತಿಯಲ್ಲಿ ತೆರೆದು ಕಾರ್ಯಪ್ರವೃತ್ತವಾಗಬೇಕು. ಬ್ಯಾಂಕು ಹಾಗೂ ಹಣಕಾಸು ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಿಗೆ ಆರ್ಥಿಕ ನೆರವನ್ನು ಒದಗಿಸುವಲ್ಲಿ ಅನುಸರಿಸುವ ನೀತಿ ನಿಯಮಗಳಲ್ಲಿ ಸರಳ ಧೋರಣೆಯನ್ನು ತಳೆಯಬೇಕು.

ಕೃಷಿ ಹಾಗೂ ಗ್ರಾಮಾಭಿವೃದ್ಧಿಗೆಂದೇ ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿರುವ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು (NABARD) ಈ ದಿಸೆಯಲ್ಲಿ ಹೊಸ ಆಶಾಭಾವನೆ ಮೂಡಿಸಿದೆ. ರಾಷ್ಟ್ರ ಮಟ್ಟದ ಈ ಬ್ಯಾಂಕು ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಯನ್ನೇ ಪ್ರಮುಖ ಧ್ಯೇಯವನ್ನಾಗಿಟ್ಟುಕೊಂಡು ವಿವಿಧ ಬ್ಯಾಂಕುಗಳ ಮೂಲಕ ಪುನರ್ಧನ ನೀಡುವುದರ ಮೂಲಕ ಅಗತ್ಯವಾದ ಆರ್ಥಿಕ ನೆರವನ್ನು ಒದಗಿಸುತ್ತದೆ.

ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರದ ಮುನ್ನಡೆಯಲ್ಲಿ ಗ್ರಾಮೀಣ ಸಮಾಜದ ಆರ್ಥಿಕ ಬೆಳವಣಿಗೆಗೆ ಪ್ರಾಧಾನ್ಯ ನೀಡಬೇಕಾದ್ದು ಎಲ್ಲ ಹಣಕಾಸು ಸಂಸ್ಥೆಗಳ ಆದ್ಯ ಕರ್ತವ್ಯ. ಇದು ಅವುಗಳ ಸಾಮಾಜಿಕ ಹೊಣೆಯೂ ಹೌದು.

---

# ಬ್ಯಾಂಕುಗಳಿಂದ ಗ್ರಾಮಗಳ ದತ್ತುಸ್ವೀಕಾರ

ಪು. ರಾ. ಮುರಳೀಧರ್

## ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧ

1968ರಿಂದೀಚೆಗೆ ವಾಣಿಜ್ಯ ಬ್ಯಾಂಕುಗಳು ವ್ಯವಸಾಯ ಕ್ಷೇತ್ರದಲ್ಲಿ ಹೆಚ್ಚುಹೆಚ್ಚಾಗಿ ಹಣಕಾಸು ತೊಡಗಿಸಲು ಪ್ರಾರಂಭಿಸಿದುವು. ಈ ರೀತಿಯ ಪ್ರವೃತ್ತಿ ಬೆಳೆಯಲು ಕಾರಣವೆಂದರೆ ಭಾರತ ಸರ್ಕಾರ ನೇಮಿಸಿದ ರಾಷ್ಟ್ರೀಯ ಉದರಿಮಂಡಲಿ [ನ್ಯಾಷನಲ್ ಕ್ರೆಡಿಟ್ ಕೌನ್ಸಿಲ್] ರೂಪಿಸಿದ ವಾಣಿಜ್ಯ ಬ್ಯಾಂಕುಗಳ ಸಮಾಜ ನಿಯಂತ್ರಣ ನೀತಿ. ಆರಂಭದಲ್ಲಿ ಈ ದಿಶೆಯಲ್ಲಿ ಬ್ಯಾಂಕುಗಳಿಗೆ ಯಾವುದೇ ಆಯಕಟ್ಟಿನ ನಿಬಂಧನೆಗಳು ಇರಲಿಲ್ಲ. ಸರ್ಕಾರದ ಆಶೋತ್ತರಗಳನ್ನು ಪೂರೈಸುವುದೇ ಬ್ಯಾಂಕುಗಳಿಗೆ ಸಮಸ್ಯೆಯಾಗಿ, ಕೇವಲ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುವ ಆಶೆಯಿಂದ ಹಳ್ಳಿಗಳಲ್ಲಿ ಕೃಷಿಕರಿಗೆ ಸಾಲಗಳನ್ನು ನೀಡುವ ಯೋಜನೆಗಳನ್ನು ಹಾಕಿಕೊಂಡುವು. ಈ ರೀತಿಯ ಯೋಜನೆಗಳು ಆಗಿನ್ನೂ ವ್ಯವಸ್ಥಿತ ರೀತಿಯಲ್ಲಿ ಇರಲಿಲ್ಲವಾದ್ದರಿಂದ ಬ್ಯಾಂಕುಗಳ ಹಣಕಾಸು ನೆರವು ಹಂಚಿಹೋಗಿ, ಸಿರಿವಂತ ರೈತರಿಗೆ ಮಾತ್ರ ಹಣಕಾಸಿನ ಸೌಲಭ್ಯ ಸಿಗುತ್ತಿತ್ತು. ಇದರ ಫಲವಾಗಿ ಒಬ್ಬನೇ ರೈತನಿಗೆ ಹಲವಾರು ಬ್ಯಾಂಕುಗಳು ಸಹಾಯ ನೀಡುತ್ತಿದ್ದುವು. ಬ್ಯಾಂಕಿನಿಂದ ಬಹುದೂರದಲ್ಲಿ ವಾಸಿಸುತ್ತಿದ್ದ ರೈತರಿಗೆ ಹಣ ಹಂಚಿಹೋಗುತ್ತಿತ್ತು, ಹಾಗೂ ಸಾಲ ಪಡೆದವರನ್ನು ಗುರುತಿಸುವುದೂ ಕಷ್ಟವಾಗುತ್ತಿತ್ತು. ಅಂಥವರಿಗೆ ಸಾಲ ನೀಡಿದಾಗ ಆ ಸಾಲದ ಪಾವತಿ, ತಪಾಸಣೆ, ಹಾಗೂ ಸಾಲದ ಖಾತೆಯ ಅನುಸರಣೆಯ ಕಾರ್ಯ ಕಷ್ಟಕರವೆಂಬುದನ್ನು ಬಹಳ ಬ್ಯಾಂಕುಗಳು ಮನಗಂಡುವು.

ಹೀಗೆ ಹಣಕಾಸು ಹಂಚಿಹೋಗುವುದನ್ನು ಹಾಗೂ ಮೇಲೆ ಹೇಳಿದ ಹಲವಾರು ನ್ಯೂನತೆಗಳನ್ನು ಸರಿಪಡಿಸಲು ಬ್ಯಾಂಕುಗಳು ಒಂದು ಕ್ರಮಬದ್ಧ ಕ್ಷೇತ್ರಾಭಿಗಮನವನ್ನು [ಏರಿಯಾ ಅಪ್ರೋಚ್] ರೂಪಿಸಿಕೊಂಡುವು. ಈ ಅಭಿಗಮನದ ಮುಖ್ಯ ಉದ್ದೇಶವೆಂದರೆ ಹಲವಾರು ಆಯ್ದ ಹಳ್ಳಿಗಳಲ್ಲಿ ಬ್ಯಾಂಕಿನ ಹಣದ ಗರಿಷ್ಠ ಉಪಯೋಗವಷ್ಟೇ ಆಗಿತ್ತು. ಇದಕ್ಕೆ ಪೂರಕವೆಂಬಂತೆ 1970ರ ಡಿಸೆಂಬರ್ ಮಾಹೆಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ಒಂದು ಸುತ್ತೋಲೆಯನ್ನು ಹೊರಡಿಸಿ, ಪ್ರತಿಯೊಂದು ಬ್ಯಾಂಕೂ ಗ್ರಾಮಪ್ರದೇಶದಲ್ಲಿ ತಾನು ಹತೋಟಿಯಲ್ಲಿಡಬಹುದಾದ ಸ್ಥಳಗಳಲ್ಲಿ ಹಣಕಾಸಿನ ನೆರವನ್ನು ಕೇಂದ್ರೀಕರಿಸಲು ಸೂಚಿಸಿತು. ಈ ಸೂಚನೆಗೆ ಸಮ್ಮತಿಯೆಂಬಂತೆ ವಾಣಿಜ್ಯ ಬ್ಯಾಂಕುಗಳು ಹಮ್ಮಿಕೊಂಡ ಯೋಜನೆಯೇ ಗ್ರಾಮಗಳ ದತ್ತುಸ್ವೀಕಾರ ಯೋಜನೆ.

### ಕಾರ್ಯಸ್ವರೂಪ

ಒಂದು ಗ್ರಾಮದ ದತ್ತುಸ್ವೀಕಾರ ಎಂದರೆ ಕೇವಲ ಆ ಒಂದು ಗ್ರಾಮ ಮಾತ್ರ ಬ್ಯಾಂಕಿನ ಹಣಕಾಸಿನ ನೆರವಿಗೆ ಬದ್ಧ ಎಂಬ ತರ್ಕ ಸಲ್ಲದು. ದತ್ತು ಸ್ವೀಕರಿಸಲ್ಪಟ್ಟ ಗ್ರಾಮಗಳ ಮೇಲೆ ಆಯಾ ಬ್ಯಾಂಕುಗಳು ಹಣಕಾಸು ನೆರವಿನ ನಿಯಂತ್ರಣವನ್ನು ಇಟ್ಟುಕೊಂಡಿರುತ್ತವೆಯಷ್ಟೇ. ಅಂದರೆ ಆ ಗ್ರಾಮದ ಸಂಪೂರ್ಣ ಅಭಿವೃದ್ಧಿಯ ಜವಾಬ್ದಾರಿ ದತ್ತು ಸ್ವೀಕರಿಸಿದ ಬ್ಯಾಂಕುಗಳದು. ದತ್ತುವಾದ ಗ್ರಾಮಗಳಲ್ಲಿ ಬ್ಯಾಂಕಿನ ಕಾರ್ಯಗಳು ಈ ರೀತಿ ಇವೆ:

1 ಸಾಧ್ಯವಾದಷ್ಟೂ ಅದೇ ಗ್ರಾಮದ ರೈತರಿಗೆ ಹಣಕಾಸು ನೆರವು ನೀಡುವುದು. ಸಣ್ಣ ರೈತರನ್ನು ಸಂಪರ್ಕಿಸಿ, ಅವರ ಕುಂದುಕೊರತೆಗಳನ್ನು ಅರಿತುಕೊಂಡು ಅವುಗಳ ನಿರ್ಮೂಲನಕ್ಕೆ ಸಹಕರಿಸುವುದು. ಉದಾಹರಣೆಗೆ, ನೀರಾವರಿ ಸೌಲಭ್ಯಗಳನ್ನು ಒದಗಿಸುವುದು, ಬಾವಿಗಳನ್ನು ತೋಡಿಸುವುದು, ಕೆರೆಗಳ ದುರಸ್ತಿ—ಇವುಗಳಿಗೆ ಹಣ ಒದಗಿಸುವುದು. ರೈತರಿಗೆ ವ್ಯವಸಾಯದಲ್ಲಿ ಸೂಕ್ತ ಮಾರ್ಗದರ್ಶನ ನೀಡುವುದು. ಅವರ ಉತ್ಪನ್ನಗಳಿಗೆ ಮಾರುಕಟ್ಟೆಗಳನ್ನು ಪರಿಚಯಿಸುವುದು, ಗೊಬ್ಬರ ಬೀಜಗಳನ್ನು ಕೊಳ್ಳಲು ಸೂಕ್ತ ಕಾಲದಲ್ಲಿ ನೆರವು ನೀಡುವುದು, ಎತ್ತುಗಳನ್ನು ಕೊಳ್ಳಲು, ಟ್ರಾಕ್ಟರ್‌ಗಳನ್ನು

ಕೊಳ್ಳಲು, ಪಂಪ್‌ಸೆಟ್ ಹಾಕಿಸಲು, ಬಾವಿ ತೋಡಿಸಲು. ಸಾಲಗಳನ್ನು ನೀಡಿ ರೈತರನ್ನು ವ್ಯಾವಸಾಯಿಕ ಚಟುವಟಿಕೆಗಳಲ್ಲಿ ತೊಡಗಿಸಿ, ಉತ್ಪಾದನೆಯ ಹಾಗೂ ರೈತನ ಆದಾಯ ವೃದ್ಧಿಗೆ ಶ್ರಮಿಸುವುದು.

2 ಗ್ರಾಮಸ್ಥರಿಗೆ ಬ್ಯಾಂಕಿನ ಬಗ್ಗೆ ತಿಳಿವಳಿಕೆ ನೀಡುವುದು ಬಹಳ ಮುಖ್ಯವಾದ ಕೆಲಸಗಳಲ್ಲಿ ಒಂದು. ಅವಿದ್ಯಾವಂತ ರೈತರಿಗೆ ಸರಿಯಾದ ತಿಳಿವಳಿಕೆ ನೀಡಿ ಅವರನ್ನು ಬ್ಯಾಂಕಿನ ವ್ಯವಹಾರದಲ್ಲಿ ತೊಡಗಿಸಬೇಕಾಗುತ್ತದೆ. ಬ್ಯಾಂಕಿನಿಂದ ಜನಸಾಮಾನ್ಯರಿಗೆ ಆಗಬಹುದಾದ ಸಹಾಯ, ಸಿಗಬಹುದಾದ ಸೌಲಭ್ಯಗಳ ಬಗ್ಗೆ ಸೂಕ್ತ ಮಾಹಿತಿಗಳನ್ನು ನೀಡಿ ಅವರಲ್ಲಿ ಬ್ಯಾಂಕಿನ ಬಗ್ಗೆ ಒಳ್ಳೆಯ ಭಾವನೆ ಮೂಡಿಸುವುದು. ಬ್ಯಾಂಕಿನ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದ ಜನ ನಮ್ಮ ದೇಶದ ಹಳ್ಳಿಗಳಲ್ಲಿ ಹೆಚ್ಚಾಗಿ ಇರುವುದರಿಂದ, ಬ್ಯಾಂಕುಗಳು ದೇಶದ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಈ ಕಾರ್ಯದ ಕಡೆಗೆ ಹೆಚ್ಚು ಗಮನ ನೀಡಬೇಕಾಗುತ್ತದೆ.

3 ಆವಶ್ಯಕತೆ ಇದ್ದವರಿಗೆ ಮಾತ್ರ ನೆರವು ನೀಡುವುದು ದತ್ತುಸ್ವೀಕಾರ ಯೋಜನೆಯ ಮುಖ್ಯ ಉದ್ದೇಶಗಳಲ್ಲಿ ಒಂದು. ಸಾಲದ ವಸೂಲಾತಿ ಕಷ್ಟ ಎಂಬ ಭಾವನೆಯಿಂದ ಹಲವು ಬ್ಯಾಂಕುಗಳು ಆಧಾರವಿಲ್ಲದೆ ಸಾಲ ನೀಡಲು ಹಿಂದೆಮುಂದೆ ನೋಡುತ್ತವೆ. ಹೀಗಾಗಿ ನಿಜವಾಗಿ ಸಾಲದ ಆವಶ್ಯಕತೆ ಇದ್ದವನಿಗೆ ನೆರವು ದೊರಕದೆ ಹೋಗಬಹುದು. ಬ್ಯಾಂಕುಗಳು ಈ ಬಗ್ಗೆ ಸಮೀಕ್ಷೆ ನಡೆಸಿ ನಿಜವಾದ ಹಣದ ಆವಶ್ಯಕತೆ ಇದ್ದ ರೈತರನ್ನು ಗುರುತಿಸಿ ಅವರ ಶ್ರೇಯೋಭಿವೃದ್ಧಿಗೆ ಸಹಕರಿಸುವುದು.

4 ಮಧ್ಯವರ್ತಿಗಳಿಂದ ರೈತರಿಗೆ ಆಗಬಹುದಾದ ತೊಂದರೆಗಳ ನಿರ್ಮೂಲನ ಕೂಡ ಬ್ಯಾಂಕುಗಳ ಗುರುತರವಾದ ಒಂದು ಹೊಣೆ. ಬ್ಯಾಂಕುಗಳು ಗ್ರಾಮಪ್ರದೇಶಗಳಲ್ಲಿ ರೈತರನ್ನು ಮಧ್ಯಮವರ್ತಿಗಳಿಂದ ಬೇರ್ಪಡಿಸಿ ಲೇವಾದೇವಿಗಾರರ ಹಿಡಿತದಿಂದ ಅವರನ್ನು ತಪ್ಪಿಸಿ ಬ್ಯಾಂಕಿನೊಂದಿಗೆ ಅವರು ವ್ಯವಹರಿಸುವಂತೆ ಉತ್ತೇಜಿಸಬೇಕು. ದಲಾಲಿಗಳ ಹತೋಟಿ ಈಗ ಬಹುತೇಕ ಹಳ್ಳಿಗಳಲ್ಲಿ ಕಡಿಮೆಯಾಗಿದೆ. ಇದಕ್ಕೆ ಬ್ಯಾಂಕುಗಳೇ ಕಾರಣವೆಂದು ಹೇಳಬಹುದಾಗಿದೆ.

5 ಗ್ರಾಮಗಳಲ್ಲಿ ಬ್ಯಾಂಕುಗಳು ಭಾಗವಹಿಸಬೇಕಾದ ಸಾಮಾಜಿಕ ಕಾರ್ಯಗಳು ಬಹಳಷ್ಟಿವೆ. ಅವುಗಳೆಂದರೆ, ರೈತರ ಮನವೊಲಿಸಲು ಆಗಿಂದಾಗ್ಗೆ ಅವರು ವಾಸಿಸುವ ಸ್ಥಳಗಳಿಗೆ ಭೇಟಿಕೊಟ್ಟು ಅವರ ಕುಂದುಕೊರತೆಗಳನ್ನು ನಿವಾರಿಸಲು ಸಹಕರಿಸುವುದು. ಸರಿಯಾದ ರಸ್ತೆಗಳೇ ಇಲ್ಲದ ಹಳ್ಳಿಗಳಿಗೆ ಸ್ಥಳೀಯ ಜನರ ನೆರವಿನಿಂದ, ಗ್ರಾಮಪಂಚಾಯತಿ, ಊರಿನ ಯುವಕ ಸಂಘಗಳ ಸಹಯೋಗದೊಂದಿಗೆ ರಸ್ತೆಗಳ ನಿರ್ಮಾಣ, ಕುಡಿಯುವ ನೀರಿನ ಸೌಲಭ್ಯ, ಬೀದಿ ದೀಪಗಳ ವ್ಯವಸ್ಥೆ, ಬಡಜನರಿಗೆ ವಸತಿ ನಿರ್ಮಾಣ ಮುಂತಾದ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕಾಗುತ್ತದೆ. ವಯಸ್ಕರ ಪಾಠಶಾಲೆ, ಮಕ್ಕಳಿಗೆ ಶಾಲೆಯ ಸೌಲಭ್ಯ ಇವುಗಳ ಬಗ್ಗೆಯೂ ಗಮನ ನೀಡಬೇಕಾಗುತ್ತದೆ. ಸಮುದಾಯ ಭಾವನೆಯ ಬೆಳವಣಿಗೆ, ಪ್ರಾರ್ಥನಾಮಂದಿರ ಮತ್ತು ರಂಗಮಂದಿರಗಳ ನಿರ್ಮಾಣ ಹೀಗೆ ಹಲವಾರು ಸಮಾಜಕಲ್ಯಾಣ ಕಾರ್ಯಕ್ರಮಗಳು ಮುಖ್ಯವಾದುವೇ. ಆಗಿಂದಾಗ್ಗೆ ಹಳ್ಳಿಗಳಲ್ಲಿ ಗ್ರಾಮಸ್ಥರಿಗೆ ಅರಿವನ್ನುಂಟುಮಾಡುವ ಉದ್ದೇಶದಿಂದ ಚಿತ್ರಪ್ರದರ್ಶನ, ಮನೋರಂಜನಾ ಕೂಟಗಳನ್ನು ಏರ್ಪಡಿಸಬೇಕಾಗುತ್ತದೆ.

ರಸ್ತೆಗಳ ನಿರ್ಮಾಣ, ಕೆರೆಗಳ ದುರಸ್ತಿ, ಕುಡಿಯುವ ನೀರಿನ ಸೌಲಭ್ಯ, ಪಾಠಶಾಲೆ, ವೈದ್ಯಕೀಯ ಸಲಹಾಮಂದಿರ ಇವೇ ಮುಂತಾದವುಗಳಿಗೆ ಬಹಳ ಖರ್ಚು ತಗಲುವುದರಿಂದ ಸರ್ಕಾರದ, ಸ್ಥಳೀಯ ಜನರ ಬೆಂಬಲವಿಲ್ಲದೆ ಬ್ಯಾಂಕೊಂದೇ ಏನೂ ಮಾಡಲು ಸಾಧ್ಯವಾಗುವುದಿಲ್ಲ. ಸರ್ಕಾರದ ವಿವಿಧ ಇಲಾಖೆಗಳೊಂದಿಗೆ ಸಂಪರ್ಕಿಸಿ ಅವುಗಳ ಸಹಕಾರದಿಂದ ಮೇಲೆ ಹೇಳಿದ ಎಲ್ಲ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕಾಗುತ್ತದೆ. ಈ ರೀತಿಯ ರಚನಾತ್ಮಕ ಕಾರ್ಯಕ್ರಮಗಳಿಗೆ ಸರ್ಕಾರ ಕೊಡಬಹುದಾದ ಸಹಾಯದ ಹಣಕ್ಕೆ ಬ್ಯಾಂಕು ತನ್ನ ಪಾಲನ್ನು ನೀಡಿ ಸಹಕರಿಸುತ್ತದೆ. ಉದಾಹರಣೆಗೆ, ಸೇತುವೆಯ ನಿರ್ಮಾಣಕ್ಕೆ ತಗಲಬಹುದಾದ ವೆಚ್ಚದ 80%ರಷ್ಟನ್ನು ಸರ್ಕಾರ ನೀಡಿದರೆ ಉಳಿದ 20%ರಷ್ಟನ್ನು ಬ್ಯಾಂಕು ತಾನೂ ಹಾಗೂ ಸ್ಥಳೀಯ ಜನತೆಯಿಂದ ಸಂಗ್ರಹಿಸಿಯೂ ಕೊಡಬೇಕಾಗುತ್ತದೆ. ಆಸ್ಪತ್ರೆಗಳನ್ನು ತೆರೆದ ಕಡೆಗಳಲ್ಲಿ ವೈದ್ಯರ ಸಲಹೆ, ಶಾಲೆಗಳನ್ನು ತೆರೆದ ಕಡೆಗಳಲ್ಲಿ ಶಿಕ್ಷಕರ ಹಾಜರಿ ಇವುಗಳ ಬಗ್ಗೆಯೂ ಶುಚಿತ್ವದ ಬಗ್ಗೆಯೂ ಬ್ಯಾಂಕುಗಳು ಗಮನ ಹರಿಸಬೇಕು.

ಮೇಲೆ ಹೇಳಿದ ಎಲ್ಲ ಹೊಣೆಗಳ ಜೊತೆಗೆ ಬ್ಯಾಂಕುಗಳು ತಮ್ಮ ಗ್ರಾಮಗಳ ದತ್ತುಸ್ವೀಕಾರ ಯೋಜನೆಯ ಕಾರ್ಯಕ್ರಮದ ಅನುಷ್ಠಾನಕ್ಕೆ ಪ್ರಯತ್ನಿಸಬೇಕು. ಸಿಬ್ಬಂದಿವರ್ಗದವರು ಆಗಿಂದಾಗ್ಗೆ ಈ ಗ್ರಾಮಗಳನ್ನು ಸಂದರ್ಶಿಸಿ ಸಲಹೆ ನೀಡಬೇಕು. ಹೊಸ ಹೊಸ ಯೋಜನೆಗಳು, ಹೆಚ್ಚಿನ ಸೌಲಭ್ಯಗಳು ದತ್ತುಪಡೆದ ಗ್ರಾಮಗಳಲ್ಲಿ ಸರಿಯಾಗಿ ಕೇಂದ್ರೀಕೃತವಾದಲ್ಲಿ ಮಾತ್ರ ದತ್ತುಸ್ವೀಕಾರದ ಧ್ಯೇಯ ಒಂದು ಪರಿಪೂರ್ಣತೆಯ ಘಟ್ಟ ತಲುಪಬಹುದು.

ಬ್ಯಾಂಕುಗಳು ದತ್ತುಸ್ವೀಕರಿಸಲು ಮುಂದಾದಾಗ, ಕೆಲವು ಅಂಶಗಳನ್ನು ಗಮನದಲ್ಲಿಡಬೇಕಾಗುತ್ತದೆ. ದತ್ತು ಸ್ವೀಕಾರವಾದ ಗ್ರಾಮ ಬ್ಯಾಂಕಿನ ಕಛೇರಿಗೆ ಹತ್ತಿರದಲ್ಲಿರಬೇಕು. ದೂರದ ಹಳ್ಳಿಗಳನ್ನು ದತ್ತು ಸ್ವೀಕರಿಸಿದರೆ, ಬ್ಯಾಂಕಿನ ಸಿಬ್ಬಂದಿವರ್ಗದವರು ಬೇಕೆಂದಾಗ ಅಲ್ಲಿಗೆ ಹೋಗಲಾಗುವುದಿಲ್ಲ. ಈ ರೀತಿ ದೂರವಿದ್ದ ಹಳ್ಳಿಗಳಲ್ಲಿ ಸಾಲದ ವಸೂಲಿ ಕಾರ್ಯವಾಗಲಿ ಮತ್ತೊಂದಾಗಲಿ ಕಷ್ಟವಾಗಬಹುದು. ಹೀಗಾಗಿ ಸಾಕಷ್ಟು ಹತ್ತಿರವಿರುವ ಹಳ್ಳಿಗಳು ದತ್ತು ಸ್ವೀಕಾರಕ್ಕೆ ಯೋಗ್ಯವಾದವು. ಎರಡನೆಯದಾಗಿ, ದತ್ತು

ಸ್ವೀಕರಿಸಲ್ಪಡುವ ಗ್ರಾಮ ಸಾಕಷ್ಟು ಹಿಂದುಳಿದಿರಬೇಕು. ರಸ್ತೆಗಳಿಲ್ಲದ, ಶಾಲೆಗಳಿಲ್ಲದ, ಆರೋಗ್ಯ ಕೇಂದ್ರವಿಲ್ಲದ ಹಳ್ಳಿಗಳು ದತ್ತುಸ್ವೀಕಾರಕ್ಕೆ ಅರ್ಹವಾದವು. ಏಕೆಂದರೆ ಇಂಥ ಗ್ರಾಮಗಳಲ್ಲಿ ಬ್ಯಾಂಕಿಂಗ್ ಕಾರ್ಯಕ್ರಮಗಳ ಆವಶ್ಯಕತೆ ಎದ್ದುಕಾಣುತ್ತದೆ. ಇಂಥ ಗ್ರಾಮಗಳನ್ನು ಅಭಿವೃದ್ಧಿ ಪಡಿಸಿದಾಗ ದತ್ತು ಸ್ವೀಕರಿಸಿದ ಬ್ಯಾಂಕಿಗೂ, ದತ್ತು ಸ್ವೀಕರಿಸಲ್ಪಟ್ಟ ಗ್ರಾಮಕ್ಕೂ ನಿಕಟಬಾಂಧವ್ಯ ಉಂಟಾಗಿ ಸುತ್ತಮುತ್ತಲ ಹಳ್ಳಿಗಳಿಗೆ ಮಾದರಿಯಾಗಬಹುದು.

## ಪ್ರಗತಿ

ಗ್ರಾಮಗಳ ದತ್ತುಸ್ವೀಕಾರ ಯೋಜನೆ ಇಂದು ಭಾರತದ ಎಲ್ಲ ವಾಣಿಜ್ಯ ಬ್ಯಾಂಕುಗಳಲ್ಲಿಯೂ ಚಾಲ್ತಿಯಲ್ಲಿದೆ. 1970 ರಿಂದೀಚೆಗೆ ಈ ಕಾರ್ಯ ಬಹಳ ತ್ವರಿತವಾಗಿ ಸಾಗುತ್ತಿದೆ. ದೊರಕಿದ ಅಂಕಿಅಂಶಗಳ ಪ್ರಕಾರ 1972ರ ಜೂನ್ ವೇಳೆಗೆ ವಿವಿಧ ಬ್ಯಾಂಕುಗಳಿಂದ ದತ್ತು ಸ್ವೀಕರಿಸಲ್ಪಟ್ಟ ಹಳ್ಳಿಗಳ ಒಟ್ಟು ಸಂಖ್ಯೆ 2,684 ಆಗಿದ್ದರೆ, 1980ರ ವೇಳೆಗೆ ಇದರ ಸಂಖ್ಯೆ ಒಂದು ಲಕ್ಷ ಹಳ್ಳಿಗಳಿಗೂ ಮೀರಿದೆ. ಭಾರತೀಯ ಸ್ಟೇಟ್ ಬ್ಯಾಂಕಿನ ಗುಂಪಿನ ಬ್ಯಾಂಕುಗಳೇ 1981ರ ಕೊನೆಯ ವೇಳೆಗೆ 48,708 ಹಳ್ಳಿಗಳನ್ನು ದತ್ತು ಸ್ವೀಕರಿಸಿವೆ. ಈ ಯೋಜನೆ ಪ್ರಾರಂಭವಾದಾಗಿನಿಂದ ಇದುವರೆಗೆ ಭಾರತದ ಹಳ್ಳಿಗಳ ಸುಮಾರು ಸೇ. 20ರಷ್ಟು ಹಳ್ಳಿಗಳಿಗೆ ದತ್ತು ಸೌಲಭ್ಯ ವಿಸ್ತರಿಸಿದೆ. 1980ರ ವೇಳೆಗೆ 1 ಲಕ್ಷಕ್ಕೂ ಮೀರಿ ಹಳ್ಳಿಗಳಿಗೆ ಸುಮಾರು 280 ಕೋಟಿ ರೂ.ಗಳಿಗೂ ಮಿಕ್ಕ ಹಣದ ನೆರವು ದೊರೆತಿದೆ. ಬ್ಯಾಂಕುಗಳ ನಡುವಣ ಪೈಪೋಟಿ ಹೆಚ್ಚಿದಂತೆಲ್ಲ ಗ್ರಾಮಗಳ ದತ್ತುಸ್ವೀಕಾರದ ಕಾರ್ಯ ಕೂಡ ಭರದಿಂದ ಸಾಗಿದೆ. ಈ ಚಟುವಟಿಕೆಯಲ್ಲಿ ಯಾವ ಬ್ಯಾಂಕೂ ಹಿಂದೆ ಬಿದ್ದಿಲ್ಲ. ಗ್ರಾಮಪ್ರದೇಶಗಳಲ್ಲಿ ಗ್ರಾಹಕರನ್ನು ತನ್ನೆಡೆಗೆ ಆಕರ್ಷಿಸಲು ಈ ಯೋಜನೆ ಸಹಾಯಕವಾಗಿದೆ. ಸರ್ಕಾರದ ಕೃಷಿ ಪುನರ್ಧನ ಮತ್ತು ಅಭಿವೃದ್ಧಿ ನಿಗಮದ (ARDC) ನೀತಿಗಳು ಕಾರ್ಯಗತವಾದಂತೆ ಬ್ಯಾಂಕುಗಳಿಗೆ ಹೆಚ್ಚಿನ ಬಲ ಬಂದಂತಾಗಿ ಗ್ರಾಮಗಳಲ್ಲಿ ಸಾಲ ನೀಡುವುದರಲ್ಲಿ ಹೆಚ್ಚಿನ ಆಸಕ್ತಿ ತೋರಿಸತೊಡಗಿದುವು. ಇದಲ್ಲದೆ ಜಿಲ್ಲಾ ಉದರಿ ಯೋಜನೆಯ ಪ್ರಭಾವದಿಂದಾಗಿ ಗ್ರಾಮ ಪ್ರದೇಶಗಳಲ್ಲಿ ಬ್ಯಾಂಕುಗಳ ಚಟುವಟಿಕೆ ಹೆಚ್ಚತೊಡಗಿದೆ. ಈ ಯೋಜನೆಯನ್ವಯ ಯಾವ ಬ್ಯಾಂಕು ಎಲ್ಲಿ ಬೇಕಾದರೂ ಸಾಲ ನೀಡಬಹುದೆಂಬ ಮುಕ್ತಅಭಿಪ್ರಾಯ ಜಾರಿಗೆ ಬಂದಿದೆ. ದತ್ತುಸ್ವೀಕಾರ ಮತ್ತು ಬಹುಅಭಿಕರಣಗಳ (ಮಲ್ಟಿ ಏಜೆನ್ಸಿ) ಸಹಯೋಗಕ್ಕಾಗಿ ಆಳವಾದ ಕ್ಷೇತ್ರಾಭಿವೃದ್ಧಿ ಅನುಸರಣೆ ಸಾಧ್ಯವಾಗಿದೆ. ಇದಲ್ಲದೆ ಸರ್ಕಾರ ರೂಪಿಸಿದ ಸಮಗ್ರ ಗ್ರಾಮಾಭಿವೃದ್ಧಿ ಕಾರ್ಯಕ್ರಮ (IRDP) ದಂತೆ ದೇಶದ ಸುಮಾರು 5,004 ಘಟಕಗಳಲ್ಲಿ ಗ್ರಾಮಾಭಿವೃದ್ಧಿ ಕಾರ್ಯ ಸಾಗುತ್ತಿದೆ. ಈ ಕಾರ್ಯಕ್ರಮದಿಂದಾಗಿ ಉತ್ಪಾದನೆಯ ಹೆಚ್ಚಳ ಮತ್ತು ಕೃಷಿ ಕ್ಷೇತ್ರದಲ್ಲಿ ಕೃಷಿ ಉತ್ಪಾದನೆಯ ಪ್ರಗತಿಗೆ ಸಹಾಯವಾಗಿದೆ. ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸರ್ಕಾರ ಸ.ಗ್ರಾ.ಅ.ಕಾ.ಕ್ಕೆ ರೂ. 1,500 ಕೋಟಿಯನ್ನು ಸಹಾಯಧನದ (ಸಬ್ಸಿಡಿ) ರೂಪದಲ್ಲಿ ನೀಡಲಿದೆ. ಈ ನಿಟ್ಟಿನಲ್ಲಿ ಬ್ಯಾಂಕಿಂಗ್ ಉದ್ಯಮ ಸುಮಾರು ರೂ. 300 ಕೋಟಿಯನ್ನು ಸಾಲಗಳಾಗಿ ನೀಡಬೇಕಾಗಿದೆ. ಸ.ಗ್ರಾ.ಅ.ಕಾ.ದಿಂದಾಗಿ ವರ್ಷಕ್ಕೆ ಕನಿಷ್ಠ 600 ಬಡ ಕುಟುಂಬಗಳನ್ನು ಗುರುತಿಸಿ ಅವನ್ನು ಬಡತನದ ರೇಖೆಯಿಂದ ಮೇಲಕ್ಕೆ ತರುವಲ್ಲಿ ಬ್ಯಾಂಕುಗಳು ಕಾರ್ಯೋನ್ಮುಖವಾಗಿವೆ.

## ಅಡಚಣೆಗಳು

ಈವರೆಗೆ ಚರ್ಚಿಸಿದ ವಿಷಯಗಳಲ್ಲಿ ಬ್ಯಾಂಕುಗಳು ಗ್ರಾಮಗಳ ದತ್ತು ಸ್ವೀಕರಿಸಿದಲ್ಲಿ ಪಾಲಿಸಬೇಕಾದ ನಿಯಮಗಳಷ್ಟೇ ಇವೆ. ಆದರೆ ಇಷ್ಟೆಲ್ಲ ಕಾರ್ಯಕ್ರಮಗಳಿದ್ದರೂ, ಲಕ್ಷಾಂತರ ಹಳ್ಳಿಗಳು ದತ್ತು ಸ್ವೀಕರಿಸಲ್ಪಟ್ಟಿದ್ದರೂ ಆ ಹಳ್ಳಿಗಳಲ್ಲಾಗಲಿ ಜನರಲ್ಲಾಗಲಿ ಹೇಳಿಕೊಳ್ಳುವಂಥ ಅಭಿವೃದ್ಧಿ ಆಗಿಲ್ಲವೆಂಬುದಂತೂ ನಿಜ. ದತ್ತು ಆದ ಅನಂತರ ಆ ಗ್ರಾಮಗಳ ಅಭಿವೃದ್ಧಿಯ ಹಾದಿಯಲ್ಲಿ ಬ್ಯಾಂಕುಗಳಿಗೆ ಒದಗಿಬರುವ ತೊಂದರೆ ಅನೇಕ. ಅವುಗಳೆಂದರೆ, ಸಿಬ್ಬಂದಿ ವರ್ಗದಲ್ಲಿನ ನಿರುತ್ಸಾಹ, ಗ್ರಾಮಗಳ ಭೇಟಿಯಲ್ಲಿ ಹೆಚ್ಚು ಅಂತರ, ಸಾಲಗಳ ವಸೂಲಾತಿ ಆಗದಿರುವುದು, ಜನತೆಯ ಹಾಗೂ ಸರ್ಕಾರದ ಅಸಹಕಾರ (ಕೆಲವೊಮ್ಮೆ), ರಾಜಕೀಯ ಕಾರಣಗಳು ಹಾಗೂ ಇತರ ಅಡಚಣೆಗಳು. ಸರಿಯಾಗಿ ಸಹಕರಿಸುವ ಸಿಬ್ಬಂದಿ ಇಲ್ಲದಿದ್ದಲ್ಲಿ ದತ್ತು ಕಾರ್ಯಕ್ರಮ ಕಷ್ಟವಾಗುತ್ತದೆ. ಗ್ರಾಮಪ್ರದೇಶಗಳಲ್ಲಿನ ಬಹುತೇಕ ಬ್ಯಾಂಕ್ ನೌಕರರಿಗೆ ಈ ಬಗ್ಗೆ ಉತ್ಸಾಹ ಇರುವುದಿಲ್ಲ. ಆಂತರಿಕ ಸಮಸ್ಯೆಗಳು, ವರ್ಗಾವಣೆ ಮತ್ತು ಇತರ ಅಡಚಣೆಗಳಿಂದ ಅವರು ಈ ದಿಶೆಯಲ್ಲಿ ನಿರುತ್ಸಾಹಿಗಳಾಗುತ್ತಾರೆ. ತಮ್ಮ ನಿರುತ್ಸಾಹದಿಂದ ದೇಶದ ಅಭಿವೃದ್ಧಿ ಕಾರ್ಯಕ್ಕೆ ಧಕ್ಕೆಯನ್ನುಂಟುಮಾಡುತ್ತಿದ್ದೇವೆಂಬ ಅರಿವೂ ಅವರಿಗಿರಲಾರದು. ಒಂದು ವೇಳೆ ಹೊಸತರಲ್ಲಿ ಅವರು ಉತ್ಸಾಹ ತೋರಿದರೂ ಕ್ರಮೇಣ ಉತ್ಸಾಹ ಇಳಿಮುಖವಾಗಿ ಹೋಗುತ್ತದೆ. ಕಾಲಕಾಲಕ್ಕೆ ಗ್ರಾಮಗಳಿಗೆ ಭೇಟಿ ನೀಡದಿದ್ದಲ್ಲಿ ಅಭಿವೃದ್ಧಿಗೆ ತಡೆಯುಂಟಾಗುತ್ತದೆ. ಸಂಚಾರದ ಅನನುಕೂಲತೆ, ಹವಾಮಾನ ಇವೆಲ್ಲವುಗಳಿಂದ ಕೂಡ ಕೆಲವೊಮ್ಮೆ ಅಡಚಣೆ ಉಂಟಾಗುತ್ತದೆ.

ಕೇವಲ ಪ್ರಚಾರಕ್ಕಾಗಿ ಗ್ರಾಮಗಳನ್ನು ದತ್ತು ಸ್ವೀಕರಿಸಿ, ಆದಕ್ಕೊಂದು ಸಮಾರಂಭ ಮಾಡಿ ಅನಂತರ ಅವುಗಳ ಗೋಜಿಗೇ ಹೋಗದಿರುವ ಬ್ಯಾಂಕುಗಳೂ ಇಲ್ಲದಿಲ್ಲ. ಆ ಗ್ರಾಮಗಳ ಮುಂದೆ ಬ್ಯಾಂಕಿನ ನಾಮಫಲಕದೊಂದಿಗೆ 'ಈ ಗ್ರಾಮವನ್ನು ನಾವು ದತ್ತು ಸ್ವೀಕರಿಸಿದ್ದೇವೆ' ಎಂಬ ಘೋಷಣೆಗಳನ್ನು ತೂಗುಹಾಕುವುದಷ್ಟೇ ದತ್ತುಸ್ವೀಕಾರದ ಧ್ಯೇಯ ಎಂದು ಹಲವು ಶಾಖೆಗಳು ಭಾವಿಸಿದಂತಿದೆ. ಕೆಲವು ಕಡೆ ಬ್ಯಾಂಕಿನ ಸಿಬ್ಬಂದಿವರ್ಗದವರ ಹೊರತಾಗಿ ಆ ಗ್ರಾಮಗಳ ಜನರಿಗೇ ತಮ್ಮದು ದತ್ತು ಸ್ವೀಕರಿಸಲ್ಪಟ್ಟ ಗ್ರಾಮ

ವೆಂಬ ಅರಿವಿರುವುದಿಲ್ಲ. ಬರೀ ಪ್ರಚಾರಕ್ಕಾಗಿ ಅಂಕಿಅಂಶ ಗಳಿಗೋಸ್ಕರ ಹಲವಾರು ಗ್ರಾಮಗಳ ದತ್ತು ಸ್ವೀಕಾರ ನಡೆದಿದೆ. ಇನ್ನು ಕೆಲವು ಗ್ರಾಮಗಳಲ್ಲಿ ದತ್ತುಸ್ವೀಕರಿಸಿ ಹಲವಾರು ವರ್ಷಗಳೇ ಸಂದಿದ್ದರೂ ಅಲ್ಲಿನ ಸೇ. 10ರಷ್ಟು ಜನರಿಗೂ ಬ್ಯಾಂಕಿನ ನೆರವು ದೊರೆತಿರುವುದಿಲ್ಲ. ಕೆಲವು ಶಾಖೆಗಳು ಒಟ್ಟಿಗೇ ನಾಲ್ಕಾರು ಗ್ರಾಮಗಳನ್ನು ದತ್ತು ಮಾಡಿಕೊಂಡು ಎಲ್ಲ ಕಡೆ ಏಕರೀತಿಯ ನೆರವು ನೀಡಲು ಸಾಧ್ಯವಾಗದೆ ಸುಮ್ಮನಾಗಿವೆ. ಕೆಲವು ಶಾಖೆಗಳಂತೂ ಬ್ಯಾಂಕಿನ ಕಛೇರಿಗೆ ಬಹಳ ದೂರದಲ್ಲಿರುವ ಹಳ್ಳಿಗಳನ್ನು ದತ್ತು ಪಡೆದು, ಆಗಿಂದಾಗ್ಗೆ ಅಲ್ಲಿಗೆ ಹೋಗಲಾಗದೆ ಬ್ಯಾಂಕು ಗಳ ಹಾಗೂ ಗ್ರಾಮದ ಜನತೆಯ ನಡುವಣ ವ್ಯವಹಾರದಲ್ಲಿ ಅಸಮರ್ಪಕತೆ ಉಂಟುಮಾಡಿಕೊಳ್ಳುತ್ತವೆ.

ಬ್ಯಾಂಕೊಂದೇ ಎಲ್ಲ ಕೆಲಸಗಳನ್ನು ಮಾಡಲು ಶಕ್ಯವಿಲ್ಲ. ಸಹಕರಿಸಬೇಕಾದ ಸರ್ಕಾರಿ ಇಲಾಖೆಗಳು ನಿರೀಕ್ಷಿಸಿದಷ್ಟು ಸಹ ಕಾರ ನೀಡುತ್ತಿಲ್ಲವಾದ್ದರಿಂದ ಗ್ರಾಮಗಳಲ್ಲಿ ಅಭಿವೃದ್ಧಿಗೆ ಅಡ್ಡಿಯಾಗಿದೆ. ಗ್ರಾಮಪಂಚಾಯತಿ, ಸಹಕಾರಿ ಸಂಘಗಳು ರಾಜಕೀಯ ಪ್ರಭಾವಿತರ ಕೈಲಿ ಉಳಿದು ಬ್ಯಾಂಕಿಗೆ ಅಷ್ಟಾಗಿ ನೆರವಿಗೆ ಬರುವುದಿಲ್ಲ. ಸಾಲಗಳ ವಸೂಲಾತಿಯಲ್ಲಂತೂ ಈ ಶಕ್ತಿಗಳು ಸರಿಯಾಗಿ ಸಹಕರಿಸದೆ ಬ್ಯಾಂಕಿನ ಲಾಭಪ್ರದತೆಗೂ, ಗ್ರಾಮದ ಅಭಿವೃದ್ಧಿ ಕಾರ್ಯಗಳಿಗೂ ತಡೆಯನ್ನುಂಟು ಮಾಡುತ್ತಿವೆ. ಸಾಲದ ವಸೂಲಾತಿ ಕಷ್ಟವಾಗುತ್ತಿದೆ. ನಾನಾ ಕಾರಣಗಳಿಂದಾಗಿ ಸಾಲವನ್ನು ಜನ ಮರುಪಾವತಿ ಮಾಡ ಲಾರರು. ಇದು ನಿಜಕ್ಕೂ ಬ್ಯಾಂಕಿನ ಅಭಿವೃದ್ಧಿಗೆ ಪ್ರೋತ್ಸಾಹ ದಾಯಕವಲ್ಲದ ವಿಷಯ. ಸಾಲ ನೀಡುವ ಬ್ಯಾಂಕು ತನ್ನ ಉಳಿದೆಲ್ಲ ಸಮಯವನ್ನು ಅದರ ವಸೂಲಾತಿಗಾಗಿ ವ್ಯಯಿಸ ಬೇಕಾಗುವುದರಿಂದ ಗ್ರಾಮದ ಇತರ ಅಭಿವೃದ್ಧಿ ಕಾರ್ಯಗಳ ಕಡೆ ಗಮನ ಹರಿಸಲು ಸಾಧ್ಯವಾಗುತ್ತಿಲ್ಲ.

ಈ ಎಲ್ಲ ಕಾರಣಗಳಿಂದ ಗ್ರಾಮಗಳ ದತ್ತುಸ್ವೀಕಾರ ಕಾರ್ಯ ಅಷ್ಟೇನೂ ಸಮರ್ಪಕವಾಗಿ ಸಾಗುತ್ತಿಲ್ಲ. ಇಷ್ಟೆಲ್ಲ ಅಡಚಣೆಗಳಿದ್ದರೂ ವಾಣಿಜ್ಯ ಬ್ಯಾಂಕುಗಳು ಗ್ರಾಮಗಳನ್ನು ದತ್ತು ಸ್ವೀಕರಿಸಲು ಹಿಂಜರಿಯದೆ, ಪ್ರಚಾರಕ್ಕಾಗಿಯೋ ಧ್ಯೇಯಸಾಧನೆಗಾಗಿಯೋ ಗ್ರಾಮಗಳ ದತ್ತುಸ್ವೀಕಾರ ಕಾರ್ಯವನ್ನು ಮುಂದವರಿಸಿಕೊಂಡೇ ಹೋಗುತ್ತಿರುವುದು ಬ್ಯಾಂಕುಗಳು ಗ್ರಾಮಪ್ರದೇಶಗಳಿಗೆ ತಮ್ಮ ಸೇವೆಯನ್ನು ವಿಸ್ತರಿಸುತ್ತಿರುವುದರ ದ್ಯೋತಕ.

ಸರ್ಕಾರ ಹಾಗೂ ಜನತೆ ಬ್ಯಾಂಕುಗಳ ನೆರವಿಗೆ ಬಂದು ಅವುಗಳ ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ಸಹಕರಿಸಿದಾಗ ಮಾತ್ರ ಬ್ಯಾಂಕುಗಳಿಂದ 'ಗ್ರಾಮಗಳ ದತ್ತುಸ್ವೀಕಾರ' ಯೋಜನೆಯ ಧ್ಯೇಯ ಪೂರ್ಣವಾಗಬಲ್ಲದು ಹಾಗೂ ಮಹಾತ್ಮಾಗಾಂಧೀಜಿಯವರ 'ಮಾದರಿ ಗ್ರಾಮ'ದ ನಿರ್ಮಾಣ ವಾಗಬಹುದಾಗಿದೆ.

---

# ಬ್ಯಾಂಕುಗಳಲ್ಲಿ ಜನಸಂಪರ್ಕ

ಅ. ಚ. ಅಶೋಕ ಕುಮಾರ

## ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧ

ಜನಸಂಪರ್ಕವೆಂದರೆ ಜನರೊಂದಿಗೆ ಸಂಬಂಧ ಅಥವಾ ಸಂಪರ್ಕ ಹೊಂದುವುದು ಎಂದು ತಿಳಿಯಬಹುದು. ಬ್ಯಾಂಕುಗಳಲ್ಲಿ ಬ್ಯಾಂಕಿನವರು ಜನರ ಜೂತೆ ಅಂದರೆ ಗ್ರಾಹಕರ ಜೊತೆ ನಡೆಸುವ ವ್ಯವಹಾರ ಜನಸಂಪರ್ಕ.

ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲೆ ಬ್ಯಾಂಕುಗಳಲ್ಲಿ ಜನಸಂಪರ್ಕ ದಿನೇ ದಿನೇ ಹೆಚ್ಚುತ್ತಿದೆ. ಆಗೂ್ಗ ಈಗೂ್ಗ ಬಹಳ ವ್ಯತ್ಯಾಸ. ಹಿಂದೆ ಈ ಸಂಪರ್ಕ ಕೆಲವೇ ಜನರ ನಡುವೆ ಇತ್ತು. ಇವರು ಶ್ರೀಮಂತವರ್ಗದವರು ಮತ್ತು ಮೇಲುದರ್ಜೆಯ ಮಧ್ಯಮವರ್ಗದ ಜನ. ಅವರ ಹೆಚ್ಚುವರಿ ಹಣದ ರಕ್ಷಣೆ ಮತ್ತು ಆವಶ್ಯಕವೆನಿಸಿದಾಗ ಹಣದ ಸಾಲ ಇವಕ್ಕೆ ಅಂದು ವ್ಯವಹಾರ ಸೀಮಿತವಾಗಿತ್ತು. ಇಂಥವರ ಸಂಖ್ಯೆಯೂ ಸೀಮಿತ, ಬಾಂಕಿನ ದೃಷ್ಟಿ ಅಂದು ಭಿನ್ನ, ಅಂದು ಬ್ಯಾಂಕಿನವರಿಗೆ ಜನಗಳ ಹಣದ ವಿಶ್ವಾಸ ರಕ್ಷಣೆಯೇ ಮುಖ್ಯ ಆದರ್ಶ. ಅಂದು ಬ್ಯಾಂಕಿನಲ್ಲಿ ಕುಳಿತುಕೊಳ್ಳುವ ಸ್ಥಳವೂ ಹಾಗೆಯೇ ರೂಪುಗೊಂಡಿತ್ತು. ಅಂದರೆ ಬ್ಯಾಂಕಿನವರು ಎತ್ತರದಲ್ಲಿ ಕುಳಿತು ಗ್ರಾಹಕರನ್ನು ನೋಡುತ್ತಿದ್ದರು. ಗ್ರಾಹಕರು ಬ್ಯಾಂಕಿನವರನ್ನು ತಲೆ ಎತ್ತಿ ನೋಡಬೇಕಾಗಿತ್ತು. ಬ್ಯಾಂಕಿನವರ ಕೃಪಾದೃಷ್ಟಿಗೆ ಕಾಯಬೇಕಾಗಿತ್ತು. ಬ್ಯಾಂಕಿನವರು ಪ್ರಭುಗಳು ಎಂಬ ಭಾವನೆಯಿತ್ತು.

ಜನಸಂಪರ್ಕಕ್ಕೆ ಇಂದು ಬಹಳ ಪ್ರಮುಖ ಸ್ಥಾನವಿದೆ. ಬ್ಯಾಂಕುಗಳು ಇದಕ್ಕೆ ಹಾತೊರೆಯುತ್ತವೆ. ಠೇವಣಿದಾರ ಬೇರೆ ಬ್ಯಾಂಕಿನಲ್ಲಿ ಮಾತ್ರವೇ ಅಲ್ಲ, ತಮ್ಮದೇ ಆದ ಬೇರೆ ಶಾಖೆಯಲ್ಲಿ ಠೇವಣಿ ಇಟ್ಟಿದ್ದರೂ ಅದನ್ನು ಕಸಿದುಕೊಳ್ಳಲು ಪ್ರತಿ ಶಾಖೆಯೂ ಪ್ರಯತ್ನಿಸುತ್ತದೆ. ತಮ್ಮ ಹಳೆಯ ಪದ್ಧತಿಗಳನ್ನು ಕಳಚಿಹಾಕಿ ಹೊಸ ದೃಷ್ಟಿಕೋನದಿಂದ ಬ್ಯಾಂಕಿನವರು ನಾಲ್ಕು ಗೋಡೆಗಳಿಂದ ಹೊರಕ್ಕೆ ಬರುತ್ತಿದ್ದಾರೆ. ಈಗಿನ ಕೌಂಟರಿನ ರಚನೆಯೂ ವಿಭಿನ್ನ, ಹಿಂದಿನದಿಕ್ಕಿಂತ ವಿರುದ್ಧ. ಈಗ ಬ್ಯಾಂಕಿನ ಕೌಂಟರ್ ಕೆಳಮಟ್ಟಕ್ಕೆ ಇದೆ. ಬ್ಯಾಂಕಿನ ಉದ್ಯೋಗಿಗಳು ಗ್ರಾಹಕನನ್ನು ತಲೆ ಎತ್ತಿ ನೋಡುತ್ತಾ ಅವನು ಹೇಳುವ ಮಾತುಗಳನ್ನು ಗಮನಿಸುತ್ತಾರೆ.

ಭಾರತೀಯ ಸ್ಟೇಟ್ ಬ್ಯಾಂಕಿನ ಮಾತುಗಳಲ್ಲಿ ಹೇಳಬೇಕಾದರೆ, "ಒಮ್ಮೆ ಬ್ಯಾಂಕು ಅಚಲವಾಗಿತ್ತು. ಎಂದರೆ ಅದು ಚಲಿಸುತ್ತಿರಲಿಲ್ಲ. ಎಲ್ಲರೂ ಅಲ್ಲಿಗೆ ಹೋಗಬೇಕಾಗಿತ್ತು. ಇಂದು ಬ್ಯಾಂಕು ಜನರ ಭೇಟಿಗಾಗಿ ತನ್ನ ನಾಲ್ಕು ಗೋಡೆಗಳ ಸಂಕೋಲೆಗಳನ್ನು ಮುರಿದು ಹಾಕಿ ಹೊರಗೆ ಹೊರಟಿದೆ–ಜನರ ಮಾರ್ಗದರ್ಶಿಯಾಗಲು ಮತ್ತು ಅವರಿಗೆ ಸಹಾಯ ಮಾಡಲು. ಇದೆಲ್ಲಾ ಏಕೆಂದರೆ ಇಂದು ಬ್ಯಾಂಕು ಸಮಾಜದ ಆವಶ್ಯಕತೆಗೆ ಹೊಂದಿಕೊಳ್ಳುತ್ತಿದೆ, ಲಾಭಕ್ಕಲ್ಲ. ಸಮಾಜದ ಒಳಿತಿಗಾಗಿ. ಧರ್ಮಕ್ಕೋಸ್ಕರವಲ್ಲ, ಬದಲಾವಣೆಯ ರಾಯಭಾರಿಯಾಗಿ."

ಬ್ಯಾಂಕಿನ ಇತಿಹಾಸದಲ್ಲೇ ಕೇಳರಿಯದ ಮಾತು ಇದು. ಬ್ಯಾಂಕಿನವರು ಗ್ರಾಹಕರನ್ನು, ಜನರನ್ನು ಹುಡುಕಿಕೊಂಡು ಅವರ ಮನೆ ಬಾಗಿಲುಗಳಿಗೆ ಹೋಗುತ್ತಿದ್ದಾರೆ. ಜನಸಂಪರ್ಕಕ್ಕಾಗಿ ಬ್ಯಾಂಕಿನವರು ತಮ್ಮ ಮನೆಬಾಗಿಲಿಗೆ ಬರುತ್ತಿದ್ದಾರಲ್ಲ ಎಂದು ಜನಕ್ಕೂ ಆಶ್ಚರ್ಯವೇ ಆಗುತ್ತಿದೆ.

ಜನಸಂಪರ್ಕವನ್ನು ಹೆಚ್ಚಿಸಲು ಪ್ರತಿಯೊಂದು ಬ್ಯಾಂಕೂ ಒಂದು ವಿಶೇಷ ವಿಭಾಗವನ್ನು ತೆರೆದಿದೆ. ಅದಕ್ಕೆ ಹಿರಿಯ ಅಧಿಕಾರಿಯ ನಾಯಕತ್ವವಿರುತ್ತದೆ. ಇದರಿಂದ ಬ್ಯಾಂಕು ಜನಸಂಪರ್ಕಕ್ಕೆ ಕೊಟ್ಟಿರುವ ಪ್ರಾಮುಖ್ಯದ ಅರಿವಾಗುತ್ತದೆ.

ಇಂದು ಬ್ಯಾಂಕುಗಳಲ್ಲಿ ಜನಸಂಪರ್ಕ ಎಷ್ಟು ವ್ಯಾಪಕವಾಗಿದೆ ಎಂದರೆ, ಜನರ ದಿನನಿತ್ಯದ ವ್ಯವಹಾರಗಳನ್ನು ಸಹ ಬ್ಯಾಂಕು ಮಾಡಿಕೊಡುತ್ತದೆ. ಅವರ ಜೀವವಿಮಾ ಕಂತು, ಮನೆಬಾಡಿಗೆ, ಕಂದಾಯ, ತೆರಿಗೆಗಳು, ವಿದ್ಯುಚ್ಛಕ್ತಿ ಶುಲ್ಕ ಇತ್ಯಾದಿಗಳನ್ನು ಕ್ಷಿಪ್ರವಾಗಿ ಬ್ಯಾಂಕು ಕೊಡುತ್ತಿದೆ. ಗ್ರಾಹಕರು ಇದರ ವಿಷಯವಾಗಿ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಬ್ಯಾಂಕು ಈಗ ಆರ್ಥಿಕ ರಂಗದಲ್ಲಿ ಮಾಡದೆ ಇರುವ ಕೆಲಸವೇ ಇಲ್ಲ ಎನ್ನಬಹುದು.

ವಿಸ್ತರಣ ಸೇವಾ ಕೇಂದ್ರ (ಎಕ್ಸ್‌ಟೆನ್ಷನ್ ಕೌಂಟರು) ಈ ನಿಟ್ಟಿನಲ್ಲಿ ಮತ್ತೊಂದು ಬೆಳವಣಿಗೆ. ಇಲ್ಲಿ ಬ್ಯಾಂಕಿನವರೇ ತಮ್ಮ ಎಲ್ಲಾ ಪುಸ್ತಕಗಳನ್ನು, ಲೇಖನ ಸಾಮಗ್ರಿಗಳನ್ನು ಗ್ರಾಹಕರು ಇರುವ ಸ್ಥಳಕ್ಕೆ ತೆಗೆದುಕೊಂಡು ಹೋಗಿ ವ್ಯವಹರಿಸುತ್ತಾರೆ. ಅಂದರೆ ಶಾಲೆ ವಿಶ್ವವಿದ್ಯಾಲಯಗಳಲ್ಲಿ, ಆಸ್ಪತ್ರೆ ಕಾರ್ಖಾನೆ ಹೋಟೆಲುಗಳು ಹಾಗೂ ದೊಡ್ಡ ದೊಡ್ಡ ಕೈಗಾರಿಕಾಕೇಂದ್ರಗಳಲ್ಲಿ ವಿಸ್ತರಣಕೇಂದ್ರಗಳಿವೆ. ಇದರಿಂದ ಜನಸಂಪರ್ಕ ಮತ್ತಷ್ಟು ವಿಶಾಲವಾಗುತ್ತಿದೆ. ಶಾಲೆಯ ಮಕ್ಕಳಿಗೆ ಖಾತೆ ತೆರೆಯುವ ವಿಶೇಷ ಯೋಜನೆ ಇದೆ. ಭಾರತದ ಕರಾರು ಅಧಿನಿಯಮ (ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್) ಅನ್ವಯ 18 ವರ್ಷ ತುಂಬಿದವರು ಮಾತ್ರ ಕರಾರು ಮಾಡಿಕೊಳ್ಳಲು ಅರ್ಹತೆ ಪಡೆದಿರುತ್ತಾರೆ. ಅಂದರೆ ಅವರು ಮಾತ್ರ ಖಾತೆಗಳನ್ನು ತೆರೆಯಬಹುದು. ಆದರೆ ಮಕ್ಕಳಿಗೆ ಆ ನಿರ್ಬಂಧವಿಲ್ಲ. ಹತ್ತು ವರ್ಷ ವಯಸ್ಸು ಆದರೆ ಸಾಕು, ಮೈಸೂರು ಬ್ಯಾಂಕು ವಿಶೇಷಯೋಜನೆ ರೂಪಿಸಿದೆ. ಇದು ಕೆಲವು ಶಾಲೆಗಳನ್ನು ದತ್ತು ತೆಗೆದು ಕೊಂಡು ಪ್ರತಿ ತಿಂಗಳೂ ಗೊತ್ತಾದ ದಿನಾಂಕ ಮತ್ತು ಸಮಯದಲ್ಲಿ ಶಾಲೆಗೆ ಹೋಗಿ ಹಣ ವ್ಯವಹಾರ ಮಾಡಲು ಅನುವು ಮಾಡಿಕೊಡುತ್ತದೆ. ಅಂದರೆ ಸಂಪರ್ಕ ಬರೀ ವಯಸ್ಕರೊಂದಿಗೆ ಮಾತ್ರವಲ್ಲ, ಮಕ್ಕಳ ಜೊತೆಗೂ ಇದೆ.

ನವೋನ್ಮೇಷ ಬ್ಯಾಂಕಿನಡಿ ಜನಸಂಪರ್ಕವಿಲ್ಲದ ಕ್ಷೇತ್ರ ವಿಲ್ಲ, ದಿಲ್ಲಿಯಿಂದ ಹಳ್ಳಿಯ ವರೆಗೆ, ಕಾಶ್ಮೀರದಿಂದ ಕನ್ಯಾ ಕುಮಾರಿಯವರೆಗೆ ವಿದ್ಯಾವಂತ ಅಧಿಕಾರಿಯಿಂದ ಗುಡ್ಡ ಗಾಡಿನ ಗಿರಿಜನರ ತನಕ ಎಲ್ಲರೊಂದಿಗೂ ಸಂಪರ್ಕಹೊಂದಿದೆ. ಇವರ ಹಿತರಕ್ಷಣೆ ಪುನರ್ವಸತಿಗೆ ಕಾರ್ಯಕ್ರಮವಿದೆ. ಎಲ್ಲಕ್ಕೂ ಬ್ಯಾಂಕು ಮುಂದೆ ಬರುತ್ತಿದೆ. ಇದು ತನ್ನ ವಿಶಾಲವಾದ ಬಾಹುಗಳಿಂದ ಸಂಪರ್ಕವನ್ನು ವಿಸ್ತರಿಸಿಕೊಳ್ಳುತ್ತಿದೆ.

ಇತ್ತೀಚೆಗೆ ಗುಂಪು ಘರ್ಷಣೆ, ಗೋಲಿಬಾರ್ ಸಾವು, ಅಂಗಡಿಗಳ ಭಸ್ಮ ಇವು ದಿನನಿತ್ಯ ಕೇಳಿಬರುತ್ತಿರುವ ಮಾತುಗಳು. ಕೆಲವು ದಿನಗಳ ಮೇಲೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಅವುಗಳ ಪುನರ್ವಸತಿಗೆ ಸಹಾಯ ಎಂಬ ವಿಷಯ ಪತ್ರಿಕೆಗಳಲ್ಲಿ ಬರುತ್ತಿದೆ. ಆಂಧ್ರದ ಚಂಡಮಾರು ತವೇ ಆಗಲಿ, ಗಂಗಾನದಿಯ ಪ್ರವಾಹವೇ ಇರಲಿ ಬ್ಯಾಂಕು ಮುಂದೆ ಬಂದು ನೊಂದ ಜನಕ್ಕೆ ನೆರವು ನೀಡುತ್ತದೆ. ಇದರ ಅರ್ಥ, ಸಂಪೂರ್ಣವಾಗಿ ಎಲ್ಲರಿಗೂ ನೆರವು ಇದೆ ಎಂದಲ್ಲ. ವಿಶಾಲ ಭಾರತದಲ್ಲಿ ಇದರ ಸೌಲಭ್ಯ ಎಲ್ಲರಿಗೂ ಸಿಗದೆ ಇರಬಹುದು. ಆದರೂ ಎಲ್ಲಾ ಬ್ಯಾಂಕುಗಳು ಈ ದಿಶೆಯಲ್ಲಿ ಮುನ್ನಡೆಯುತ್ತಿವೆ. ಇಂದು ಬ್ಯಾಂಕುಗಳ ಗುರಿ ಕೇವಲ ಠೇವಣಿ ಸಂಗ್ರಹಣೆ ಮಾತ್ರವಲ್ಲ.

ನಿರುದ್ಯೋಗಿ ವಿದ್ಯಾವಂತರೊಂದಿಗೂ ಬ್ಯಾಂಕಿನ ಸಂಪರ್ಕವಿದೆ. ಅವರು ಬ್ಯಾಂಕಿನ ಠೇವಣಿದಾರರೂ ಅಲ್ಲ, ಸಾಲಗಾರರೂ ಅಲ್ಲ. ಅವರಿಗೆ ಜಿಲ್ಲಾ ಕೈಗಾರಿಕಾ ಕೇಂದ್ರದ ನೆರವಿನಿಂದ ಉದ್ಯೋಗ ತರಬೇತಿಗೆ ಸಹಾಯ ನೀಡಿ ಅನಂತರ ಧನ ನೀಡುತ್ತದೆ.

ಕೆಲವು ದಿನಗಳ ಹಿಂದೆ ವಾಯು ಪಡೆ ತನ್ನ ಚಿನ್ನದ ಹಬ್ಬವನ್ನು ಆಚರಿಸಿತು. ಆಗ ಭಾರತೀಯ ಸ್ಟೇಟ್ ಬ್ಯಾಂಕ್ ಹೊರಡಿಸಿದ ಪ್ರಕಟಣೆ ಮನ ಮಿಡಿಯುವಂಥದು. ಹಾರಾಡುತ್ತಿದ್ದ ವಿಮಾನ ಕೆಳಕ್ಕೆ ಬಿದ್ದು ನುಚ್ಚುನೂರಾ ಯಿತು. ಚಾಲಕನಿಗೆ ಪ್ರಜ್ಞೆ ಬಂದಾಗ ಎರಡು ವಿಷಯ ಜ್ಞಾಪಕಕ್ಕೆ ಬಂತು. ಒಂದು, ವಿಮಾನ ಕೆಳಕ್ಕೆ ಬಿದ್ದದ್ದು ಮತ್ತು ತಾನು ಜೀವಂತವಾಗಿರುವುದು. ತನ್ನ ಎರಡು ಕಾಲುಗಳು ಹೋಗಿರುವುದನ್ನು ತಿಳಿಯಲು ಎರಡು ದಿನ ಬೇಕಾಯಿತು. ತನ್ನ ಜೀವನರಕ್ಷೆಯಾಗಿದ್ದ ಭಾರತೀಯ ವಾಯು ಪಡೆಯ ಕೆಲಸ ಇನ್ನಿಲ್ಲವಾಯಿತು. ಆತನ ಪತ್ನಿ ಯಿಂದ ಸಮಾಧಾನ, ನೀವಾದರೂ ಉಳಿದಿರಲ್ಲ ಎಂದು. ಮತ್ತೊಂದು ಘಟನೆ: ಮನೆ ಒಡತಿ ತನ್ನ ಸುಂದರ ಮಕ್ಕಳಿಗೆ ಮನೆಯಲ್ಲಿ ಪಾಠ ಹೇಳಿಕೊಡುತ್ತಿದ್ದಾಳೆ. ಮೇಜಿನ ಮೇಲೆ ಪತಿಯ ಭಾವಚಿತ್ರ ಮುಗುಳ್ನಗುತ್ತಿದೆ. ಆದರೆ ಇವರಿಗೆ ನೂರಾರು ಮೈಲಿ ದೂರದಲ್ಲಿ ನಡೆದ ಒರಿಸ್ಸಾ ಚಂಡ ಮಾರುತದಲ್ಲಿ ಆತ ಸತ್ತಿರುವ ವಿಷಯ ಗೊತ್ತಿಲ್ಲ. ಇಬ್ಬರ ನೆರವಿಗೂ ಸ್ಟೇಟ್ ಬ್ಯಾಂಕು ಮುಂದೆ ಬಂದಿದೆ. ಇಂದು ಆ ಕುಟುಂಬಗಳು ಹಳ್ಳಿಯ ಸಮಾಧಾನಕರವಾದ ಜೀವನ ನಡೆಸುತ್ತಿವೆ. ಮತ್ತು ಬ್ಯಾಂಕು ಇದೇ ರೀತಿ ಅನೇಕ ರೊಂದಿಗೆ ಸಂಪರ್ಕ ಹೊಂದಿದೆ. ನಿವೃತ್ತಿ ಹೊಂದಿದವರು ಸಹ ತಮ್ಮ ವೇತನಗಳನ್ನು ಬ್ಯಾಂಕಿನ ಮೂಲಕ ತೆಗೆದು ಕೊಳ್ಳುತ್ತಿದ್ದಾರೆ. ಬ್ಯಾಂಕುಗಳ ಜನಸಂಪರ್ಕ ಎಲ್ಲಾ ವರ್ಗದ ಜನರೊಂದಿಗೆ ಇದೆ. ಬ್ಯಾಂಕುಗಳ ಜನಸಂಪರ್ಕದ ವ್ಯಾಪ್ತಿ ಎಷ್ಟು ಎಂದು ಅಳೆಯಲು ಸಾಧ್ಯವಿಲ್ಲದ ಮಟ್ಟಕ್ಕೆ ಅದು ಬೆಳೆದಿದೆ.

ಕೆನರಾ ಬ್ಯಾಂಕಿನ ಸೀತಾರಾಂ ಪ್ರಭು (ಕಾವ್ಯನಾಮ ರಮಾತನಯ) ಬರೆದಿರುವ ಪುಸ್ತಕದಲ್ಲಿ ಬ್ರಿಟನ್ನಿನ ಹಳ್ಳಿಗಳ ಬ್ಯಾಂಕು ಅಧಿಕಾರಿ ವ್ಯವಸ್ಥಾಪಕನ ಪಾತ್ರವನ್ನು ಹೀಗೆಂದು ಹೇಳಿದ್ದಾರೆ : 'ಹಳ್ಳಿಗಳ ಬ್ಯಾಂಕು ಅಧಿಕಾರಿಗಳು ಎಂದರೆ ಜನರ ಪಾಲಿಗೆ ಮಿತ್ರರು, ಸಲಹೆಗಾರರು, ಮಾರ್ಗದರ್ಶಕರು. ತಮ್ಮ ಗ್ರಾಹಕರ ಹಿತಚಿಂತಕರು ಹಾಗೂ ಅವರ ಹಲವು ಸಮಸ್ಯೆಗಳನ್ನು ಪರಿಹರಿಸಲು ಸಹಾಯಕರಾಗಿದ್ದಾರೆ. ಸಂಸಾರದ ತಾಪತ್ರಯಗಳಲ್ಲಿ—ಗಂಡಹೆಂಡಿರ ಜಗಳಗಳಲ್ಲಿ ಅಥವಾ ವ್ಯವಹಾರಕ್ಕೆ ಸಂಬಂಧಿಸಿದಂತೆ ಭಾಗಸ್ಥರ ಭಿನ್ನಾಭಿ ಪ್ರಾಯಗಳನ್ನು ಹೋಗಲಾಡಿಸುವುದರಲ್ಲಿ—ಬ್ಯಾಂಕಿನ ಮ್ಯಾನೇಜರರು ಸಾಮರ್ಥ್ಯವುಳ್ಳವರಾಗಿದ್ದಾರೆ. ಹೀಗಾಗಿ ಕೇವಲ ಆರ್ಥಿಕ ರಂಗದಲ್ಲಿಯೆ ಅಲ್ಲದೆ ಸಾಮಾಜಿಕ ಜೀವನ ರಂಗದಲ್ಲೂ ಬ್ಯಾಂಕು ಮ್ಯಾನೇಜರರ ಪಾತ್ರ ಬಹಳ ಮಹತ್ತರವಾದುದು. ತಮ್ಮ ಎಲ್ಲಾ ಗಿರಾಕಿಗಳಿಗೆ ಬ್ಯಾಂಕು ಮ್ಯಾನೇಜರ್ ಒಂದು ಒಂದು ರೀತಿಯಲ್ಲಿ ಮುಖಂಡ ರಿದ್ದಂತೆ.'

ಈ ದಿಶೆಯಲ್ಲಿ ಬ್ಯಾಂಕುಗಳು ಸಾಗುತ್ತಿವೆ. ಬ್ಯಾಂಕುಗಳ ಜನಸಂಪರ್ಕ ವರ್ಣಿಸಲು ಸಾಧ್ಯವಿಲ್ಲದಷ್ಟು ವಿಸ್ತಾರ ಗೊಂಡಿದೆ.

# ಬ್ಯಾಂಕುಗಳಲ್ಲಿ ಭದ್ರತಾ ವ್ಯವಸ್ಥೆ

ಜಿ. ಎನ್. ನರಸಿಂಹಮೂರ್ತಿ

## ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧ

'ಪಿಸ್ತೂಲುಧಾರಿ ಯುವಕರಿಂದ ಬ್ಯಾಂಕ್ ದರೋಡೆ,' 'ಮುಖವಾಡಧಾರಿಗಳು ಬ್ಯಾಂಕ್ ಕ್ಯಾಷಿಯರನನ್ನು ಬೆದರಿಸಿ ಹಣ ದೋಚಿಕೊಂಡು ಪರಾರಿಯಾದರು,' 'ಬ್ಯಾಂಕ್ ಶಾಖೆಯೊಂದು ಅಗ್ನಿಗಾಹುತಿಯಾಗಿ ಲಕ್ಷಾಂತರ ರೂ. ನಷ್ಟ,' 'ಗ್ರಾಮಾಂತರ ಪ್ರದೇಶದ ಬ್ಯಾಂಕಿನ ನೋಟುಗಳು ಗೆಜ್ಜಲಿಗೆ ಆಹಾರ.' ಇಂಥ ವರದಿಗಳು ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುವುದು ಇತ್ತೀಚೆಗೆ ಸಾಮಾನ್ಯವಾಗಿಬಿಟ್ಟಿದೆ.

ಬ್ಯಾಂಕೆಂದರೆ, ಸಾರ್ವಜನಿಕರು ಅತ್ಯಂತ ಸುರಕ್ಷಿತ ಸ್ಥಳವೆಂದು ಭಾವಿಸಿ ತಮ್ಮ ಹಣವನ್ನು ಅಲ್ಲಿಯ ಖಾತೆಗಳಲ್ಲಿ ತೊಡಗಿಸುವ ಸ್ಥಳ. ಸಾರ್ವಜನಿಕರ ಈ ನಂಬಿಕೆಯನ್ನು ಯಾವ ರೀತಿಯಲ್ಲೂ ಕಳೆದುಕೊಳ್ಳದೆ ಇರುವುದು ಬ್ಯಾಂಕುಗಳ ಮೂಲಭೂತ ಹೊಣೆಗಾರಿಕೆಯಾಗಿರುತ್ತದೆ. ಇಂತಹ ನಂಬಿಕೆಯ ಮೇಲೆಯೇ ಇಡೀ ಬ್ಯಾಂಕಿಂಗ್ ಉದ್ಯಮ ನಿಂತಿದೆ.

ಕೇಂದ್ರ ಬ್ಯಾಂಕಿಂಗ್ ಪದ್ಧತಿ ಪ್ರಾರಂಭವಾಗಿ, ಎಲ್ಲ ಬ್ಯಾಂಕುಗಳ ಸ್ಥಿರತೆಯನ್ನು ಕಾಯುವ ವ್ಯವಸ್ಥೆ ಏರ್ಪಡುವವರೆಗೆ ಬ್ಯಾಂಕುಗಳು ಯಾವ ಸಮಯದಲ್ಲಾದರೂ ದಿವಾಳಿಯೇಳಬಹುದೆನ್ನುವ ಭೀತಿ ಸಾರ್ವಜನಿಕರನ್ನು ಆವರಿಸಿತ್ತು. ಈಗ ಪರಿಸ್ಥಿತಿ ಬದಲಾಗಿದೆ. ಸರಕಾರ ಮತ್ತು ರಿಸರ್ವ್ ಬ್ಯಾಂಕ್ ಇವು ಬ್ಯಾಂಕುಗಳ ಸ್ಥಿರತೆಗೆ ಬೇಕಾಗುವ ನಿಯಮಾವಳಿಗಳನ್ನು ರೂಪಿಸಿ, ಅವನ್ನು ಬ್ಯಾಂಕುಗಳು ಪಾಲಿಸುವಂತೆ ನೋಡಿಕೊಳ್ಳುತ್ತಿವೆ.

ಆದರೂ ಬ್ಯಾಂಕು, ಸಾರ್ವಜನಿಕರು ತನಗೊಪ್ಪಿಸಿದ ಠೇವಣಿರೂಪದ ಹಣವನ್ನು, ಇತರ ಅಮೂಲ್ಯ ವಸ್ತುಗಳನ್ನು ಅತ್ಯಂತ ಜವಾಬ್ದಾರಿಯಿಂದ ರಕ್ಷಿಸಿ ಮರುಪಾವತಿ ಮಾಡುವುದು ಅತ್ಯಂತ ಆವಶ್ಯಕವಾಗಿರುತ್ತದೆ.

ಇದರ ಸಲುವಾಗಿ ಬ್ಯಾಂಕುಗಳು ತಮ್ಮ ಕಟ್ಟಡ, ದಾಖಲೆಗಳು, ನಗದು ಹಣ, ಅಮೂಲ್ಯ ವಸ್ತುಗಳು ಇವುಗಳನ್ನು ಸುರಕ್ಷಿತವಾಗಿರಿಸಲು ಬೇಕಾದ ಎಲ್ಲ ಕ್ರಮಗಳನ್ನೂ ಕೈಗೊಳ್ಳಬೇಕಾಗುತ್ತದೆ. ಇಂದಿನ ದಿನಗಳಲ್ಲಿ ಇದು ಸುಲಭದ ಮಾತೇನಲ್ಲ. ಬ್ಯಾಂಕು ಎಂದರೆ ಹಣದ ಖಜಾನೆ ಎನ್ನುವ ಅಂಶವೇ ದರೋಡೆಕೋರರಿಗೆ, ಕಳ್ಳಕಾಕರಿಗೆ ಪ್ರಿಯವಾಗುವಂತೆ ಮಾಡುತ್ತದೆ. ಹಣವಿರುವ ಸ್ಥಳವನ್ನು ಹುಡುಕುವ ಕಷ್ಟವನ್ನು ತಪ್ಪಿಸುತ್ತದೆ. ಕಳೆದ ವರ್ಷದ ಮೊದಲ ಅರ್ಧದಷ್ಟು ಕಾಲದಲ್ಲೇ ರೂ. 83.8 ಲಕ್ಷದಷ್ಟು ನಗದು ಹಾಗೂ ಇತರ ವಸ್ತುಗಳು ಭಾರತದ ಬ್ಯಾಂಕುಗಳಿಂದ ಕಳವಾಗಿವೆ/ದರೋಡೆಕೋರರಿಂದ ಅಪಹರಿಸಲ್ಪಟ್ಟಿವೆ. ಬ್ಯಾಂಕುಗಳ ಲಾಭಗಳಿಕೆಯ ಪೈಕಿ ಈ ಮೊತ್ತ ಅಲ್ಪ ಎನಿಸಿದರೂ, ಬ್ಯಾಂಕಿನ ಭದ್ರತಾ ವ್ಯವಸ್ಥೆಯ ಕಡೆ ಗಮನಕೊಡುವುದು ಅತ್ಯಗತ್ಯವಾಗಿದೆ.

ಮೊದಲನೆಯದಾಗಿ ಬ್ಯಾಂಕಿನ ಶಾಖೆಯ ಸ್ಥಳ. ಇದು ಜನನಿಬಿಡವಾದ ಪ್ರದೇಶದಲ್ಲಿರಬೇಕು. ಇದು ಗ್ರಾಹಕರಿಗೆ ಅನುಕೂಲವನ್ನೂ ಬ್ಯಾಂಕಿಗೆ ಸುರಕ್ಷತೆಯನ್ನೂ ಒದಗಿಸುತ್ತದೆ. ಜನನಿಬಿಡ ಪ್ರದೇಶಗಳಲ್ಲಿನ ಬ್ಯಾಂಕಿನ ಶಾಖೆಗಳು ಕೂಡ ದರೋಡೆಕೋರರ ಆಕ್ರಮಣಕ್ಕೊಳಗಾಗಿರುವ ನಿದರ್ಶನಗಳಿದ್ದರೂ ಸಹ ದೂರದ ಬಡಾವಣೆಗಳಲ್ಲಿಯ ಶಾಖೆಗಳೇ ದರೋಡೆಕೋರರಿಗೆ ಹೆಚ್ಚು ಸೂಕ್ತವೆನಿಸಿವೆ, ಎನ್ನುವ ತೀರ್ಮಾನಕ್ಕೆ ಬರಲು ಹೆಚ್ಚು ಆಧಾರಗಳಿವೆ. ದೊಡ್ಡ ನಗರಗಳಲ್ಲಿ ಹೊಸ ಬಡಾವಣೆಗಳಲ್ಲಿ ತಮ್ಮ ಶಾಖೆಯನ್ನು ಮೊದಲು ತೆರೆಯಬೇಕೆಂದು ಬ್ಯಾಂಕುಗಳು ಪೈಪೋಟಿ ನಡೆಸುವುದುಂಟು. ಆದರೆ ಈ ಪೈಪೋಟಿಯ ಭರದಲ್ಲಿ ಎಲ್ಲೆಂದರಲ್ಲಿ ಶಾಖೆಯನ್ನು ತೆರೆಯುವುದು ಸೂಕ್ತವಲ್ಲ. ಶಾಖೆ ಆಯಕಟ್ಟಿನ ಸ್ಥಳದಲ್ಲಿರುವಂತೆ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ಗ್ರಾಮಾಂತರ ಪ್ರದೇಶದಲ್ಲಾದರೆ, ಊರಿನ ಮಧ್ಯೆ ಪೋಲೀಸ್ ಠಾಣೆಗೆ ಹತ್ತಿರವಾಗಿರುವಂತೆ ಬ್ಯಾಂಕಿನ ಕಟ್ಟಡ ಇರುವುದು ಆವಶ್ಯಕ.

ಜಾಗವನ್ನಾಯ್ದನಂತರ ಕಟ್ಟಡದ ಸ್ವರೂಪದ ಕಡೆಗೆ ಗಮನ ಕೊಡಬೇಕು. ಕಟ್ಟಡ ಸಿಮೆಂಟಿನಿಂದ ಕಟ್ಟಲ್ಪಟ್ಟು ಭದ್ರವಾಗಿರಬೇಕು. ಮಳೆಗಾಳಿಗಳನ್ನು ಯಶಸ್ವಿಯಾಗಿ

ಎದುರಿಸುವಂತಿರಬೇಕು. ಗ್ರಾಮಾಂತರ ಪ್ರದೇಶಗಳಲ್ಲಿ ಕೆಲವೊಮ್ಮೆ ಸಿಮೆಂಟಿನ ಕಟ್ಟಡಗಳು ದೊರೆಯುವುದಿಲ್ಲ. ಹೆಂಚಿನ ಹೊದಿಕೆ, ಮರದ ತೊಲೆಗಳನ್ನು ಆಧರಿಸಿರುವ ಛಾವಣಿ, ಮಣ್ಣಿನಿಂದ ಕಟ್ಟಿದ ಗೋಡೆಗಳು ಇವುಗಳಿಂದ ಕೂಡಿದ ಕಟ್ಟಡದ ಆಯ್ಕೆ ಅನಿವಾರ್ಯವಾಗುತ್ತದೆ. ಆದರೆ ಆದಷ್ಟು ಕಡಿಮೆ ಪ್ರವೇಶಗಳಿರುವ ಕಟ್ಟಡವನ್ನು ಆರಿಸಬಹುದು. ಇಂಥಾ ಕಟ್ಟಡಗಳನ್ನು ಶಾಖೆಗಾಗಿ ಆಯ್ಕೆ ಮಾಡಿದಾಗ, ವ್ಯವಹಾರವನ್ನು ಪ್ರಾರಂಭಿಸುವುದಕ್ಕೆ ಮುನ್ನ ಈ ಕೆಲವು ಕ್ರಮಗಳನ್ನು ಕೈಗೊಳ್ಳಬೇಕು :

1 ಹೆಂಚಿನಿಂದ ಮಳೆ ನೀರು ಸೋರದ ಹಾಗಿರಲು ಮತ್ತು ಸುಲಭವಾಗಿ ತೆಗೆಯದಂತಿರಲು ಹೆಂಚಿನ ಮೇಲೆ ಸಿಮೆಂಟಿನ ಹೊದಿಕೆ ಹೊದಿಸಬೇಕು.

2 ನಗದು ಹಣ (ಕರೆನ್ಸಿ ನೋಟುಗಳು), ಆಭರಣಗಳು, ರಕ್ಷಣೆಗಾಗಿ ಇಡಲ್ಪಡುವ ಇತರ ವಸ್ತುಗಳನ್ನಿಡಲು ಭದ್ರ ಕೊಠಡಿಯೊಂದನ್ನು ಸ್ಥಾಪಿಸಬೇಕು. ಈ ಕೊಠಡಿಗೂ, ಕೋಣೆಯ ಗೋಡೆಗೂ ಮಧ್ಯೆ ಆದಷ್ಟು ಕಡಿಮೆ ಅಂತರ ವಿರಬೇಕು (ಒಬ್ಬ ಮನುಷ್ಯ ಇರುವುದಕ್ಕೆ ಅಗತ್ಯವಾದುದಕ್ಕಿಂತ ಕಡಿಮೆ).

3 ಕಟ್ಟಡಕ್ಕೆ ವಿಶಾಲವಾದ ಹೊರಾವರಣವಿದ್ದಲ್ಲಿ ಎತ್ತರದ ಗೋಡೆಯನ್ನು ಎಬ್ಬಿಸಬೇಕು.

ಹಿಂದೆ ಹೇಳಿದಂತೆ ಕಟ್ಟಡವನ್ನು ಸಿದ್ಧಪಡಿಸಿದ ಅನಂತರ ಅದರ ಕಿಟಕಿ ಬಾಗಿಲುಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಚನ್ನಾಗಿ ಗಾಳಿ, ಬೆಳಕು ಬರಲೆಂಬ ಉದ್ದೇಶದಿಂದ ದೊಡ್ಡ ಕಿಟಕಿಗಳು, ಬಾಗಿಲುಗಳು ಇರುವುದು ಸಹಜ. ಆದರೆ ಇದು ಕಳ್ಳಕಾಕರಿಗೆ ಅನುಕೂಲಕರವಾಗಬಾರದು.ಕಿಟಕಿಗಳ ಕಬ್ಬಿಣದ ಸರಳುಗಳ ನಡುವೆ ತಂತಿಯ ಬಲೆ ಇರಬೇಕು. ಈ ಬಲೆ ಗೋಡೆಯ ಒಳಗೆ ಕನಿಷ್ಠ ನಾಲ್ಕಿಂಚುಗಳಾದರೂ ಹೊಕ್ಕಿರಬೇಕು. ವಿಶೇಷವಾಗಿ ಎತ್ತರದಲ್ಲಿರುವ ಗಾಳಿಕಿಟಕಿಗಳನ್ನು ಗಮನಿಸಿ ಇದೇ ರೀತಿ ಭದ್ರಪಡಿಸಬೇಕು. ಏಕೆಂದರೆ ಸಾಮಾನ್ಯವಾಗಿ ಕಿಟಕಿಗಳ ಕಡೆ ಕಟ್ಟಡ ನಿರ್ಮಾತೃಗಳು ಭದ್ರತೆಯ ದೃಷ್ಟಿಯಿಂದ ಹೆಚ್ಚು ಗಮನ ಕೊಟ್ಟಿರುವುದಿಲ್ಲ. ಅಲ್ಲದೆ ಇಂತಹ ಕಿಟಕಿಗಳು ಸಾಧ್ಯವಾದಷ್ಟು ಚಿಕ್ಕದಾಗಿರುವ ಹಾಗೆ ನೋಡಿಕೊಳ್ಳುವುದು ಆವಶ್ಯಕ. ಬಾಗಿಲುಗಳು ಒಳ್ಳೆಯ ಮರದಿಂದ ಮಾಡಲ್ಪಟ್ಟು ನುಸಿ, ಗೆದ್ದಲು ಹಿಡಿಯುವಂತಿರಬಾರದು. ಬಹುಕಾಲ ದೃಢವಾಗಿರುವಂತಿರಬೇಕು. ಚಿಲಕಗಳನ್ನು ತಿರುಪುಮೊಳೆಗಳಿಂದ ಕೂಡಿಸಿರಬಾರದು. ಹೀಗಿದ್ದರೆ ಎಂತಹ ಬೀಗ ಹಾಕಿದರೂ ಪ್ರಯೋಜನವಾಗುವುದಿಲ್ಲ. ಸುರುಳಿ ಬಾಗಿಲುಗಳಿದ್ದಲ್ಲಿ, ನಾಲ್ಕು ಅಡಿಗಳಿಗೊಂದರಂತೆ ಬೀಗ ಹಾಕುವಂತಿರಬೇಕು. ಇದಕ್ಕೆ ಹಿನ್ನೆಲೆಯಾಗಿ ಈ ಘಟನೆಯನ್ನು ನೋಡಿ :

ದಕ್ಷಿಣ ಭಾರತದ ಪ್ರಖ್ಯಾತ ನಗರವೊಂದರ ಜವಾಹಿರಿ ಅಂಗಡಿಗಳಿಗೆ ಸುರುಳಿ ಬಾಗಿಲುಗಳಿದ್ದುವು. ಆ ಅಂಗಡಿಗಳೊಳಗೆ ಹಾಕಿದ್ದ ಬೀಗ ಹಾಕಿದಂತೆಯೇ, ಅಮೂಲ್ಯ ಆಭರಣಗಳು ಕಳವಾಗುತ್ತಿದ್ದುವು. ಮಾಲೀಕರು ಪೊಲೀಸರಿಗೆ ದೂರಿತ್ತರು. ಪೊಲೀಸರಿಗೂ ಇದು ತಲೆನೋವಿನ ವಿಷಯವಾಯಿತು. ಒಂದು ದಿನ ರಾತ್ರಿ ಗಸ್ತು ತಿರುಗುತ್ತಿದ್ದ ಪೊಲೀಸಿನವನೊಬ್ಬ, ಜವಾಹಿರಿ ಅಂಗಡಿಗಳ ಮುಂದೆ ಕೆಲವರು ಕಂಬಳಿ ಹೊದ್ದು ಮಲಗಿದ್ದುದನ್ನು ಕಂಡು ವಿಸ್ಮಿತನಾದ. ಏಕೆಂದರೆ ಅದು ಅತ್ಯಂತ ಸೆಕೆಯ ಪ್ರದೇಶವಾಗಿತ್ತು. ಅಲ್ಲದೆ ಸಾಮಾನ್ಯರು ಮೈಮೇಲೆ ಬಟ್ಟೆ ಹಾಕಲೇ ಹಿಂದು ಮುಂದು ನೋಡುವ ಸಮಯ. ಸಂದೇಹ ಮೂಡಿ, ತನ್ನ ಸಹಾಯಕರನ್ನು ಕರೆಯಲು ಸೀಟಿ ಊದಿದ. ಎರಡು ಮೂರು ಸೀಟಿಗಳು ಪ್ರತಿಧ್ವನಿಸಿದವು. ಗಸ್ತಿನ ಪೊಲೀಸರು ನೋಡುತ್ತಿದ್ದಂತೆಯೇ ಕಂಬಳಿಗಳು ಮೇಲೆದ್ದು, ಒಳಗಿನ ಆಕೃತಿಗಳು ವೇಗವಾಗಿ ಪೊಲೀಸನ ವಿರುದ್ಧ ದಿಕ್ಕಿನಲ್ಲಿ ಚಲಿಸಲಾರಂಭಿಸಿದವು. ಇದರಿಂದ ಹುಷಾರಾದ ಪೊಲೀಸ ಅಷ್ಟು ಹೊತ್ತಿಗೆ ಜತೆಗೂಡಿದ ಸಂಗಡಿಗರ ಸಹಾಯದಿಂದ ಅವರನ್ನು ತಡೆದ. ವಿವರವಾಗಿ ನೋಡುವಾಗ ಅವರ ಬಳಿ ಎರಡು ಉದ್ದನೆಯ ಹಾರೆಗಳು ಕಂಡುಬಂದುವು. ಅವರನ್ನು ಬಂಧಿಸಿ ಠಾಣೆಗೆ ಕರೆದೊಯ್ಯಲಾಯಿತು. ಅವರು ಮಧ್ಯಪ್ರದೇಶದ ನೆಲೆಗಳಿಂದ ಬಂದ ಡಕಾಯಿತರೆಂದೂ ಬಹು ದಿನಗಳಿಂದ ಪೊಲೀಸರಿಗೆ ಬೇಕಾಗಿದ್ದವರೆಂದೂ ತಿಳಿದು ಬಂತು. ಹಾರೆಯನ್ನು ಸನ್ನೆಯಾಗಿಸಿಕೊಂಡು ಸುರುಳಿ ಬಾಗಿಲುಗಳನ್ನು, ಮೀಟಿದರೆ ಒಬ್ಬ ಮನುಷ್ಯ ಒಳಹೋಗುವಷ್ಟು ಕಂಡಿ ಬಿಡುತ್ತದೆ ಎಂದೂ, ಅದನ್ನೇ ಜವಾಹಿರಿ ಕದಿಯಲು ಬಳಸುತ್ತಿದ್ದುದಾಗ್ಯೂ ಅವರು ಒಪ್ಪಿಕೊಂಡರು. ಜವಾಹಿರಿ ವ್ಯಾಪಾರಿಗಳ, ಪೊಲೀಸರ ಕ್ಲಿಷ್ಟಸಮಸ್ಯೆ ಬಗೆಹರಿಯಿತು. ಆರ್ಕಿಮಿಡೀಸನ ಸಂಶೋಧನೆಯ ಮಹತ್ವವನ್ನು ಡಕಾಯಿತರು ಹೀಗೆ ಉಪಯೋಗಿಸಿಕೊಂಡರು. ಆದ್ದರಿಂದ ಮಧ್ಯೆ ಇನ್ನೊಂದು ಬೀಗವನ್ನು ಹಾಕುವುದು ಅತ್ಯಾವಶ್ಯಕ. ಇದರಿಂದ ಬೀಗ ಹಾಕಿದಂತೆಯೇ ಇದ್ದು, ಒಳಗಿನ ಅಮೂಲ್ಯ ವಸ್ತುಗಳು ಕಣ್ಮರೆಯಾದಾಗಿನ ಅನಂತರದ ಪೇಚಿನ ಸ್ಥಿತಿಯನ್ನು ತಪ್ಪಿಸಿಕೊಳ್ಳಬಹುದು.

ಅನೇಕ ಕಟ್ಟಡಗಳು ವಸತಿಯ ಉದ್ದೇಶದಿಂದ ನಿರ್ಮಿತವಾಗಿದ್ದು, ಅವುಗಳನ್ನು ಬ್ಯಾಂಕಿನ ಶಾಖೆಗಾಗಿ ಆರಿಸಬೇಕಾಗುತ್ತದೆ. ಇಂತಹ ಕಟ್ಟಡದಲ್ಲಿ ಹೊಗೆಗೂಡು, ಚಿಮಣಿ ಕೊಳವೆಗಳು, ಗವಾಕ್ಷಿಗಳು ಇರುತ್ತವೆ. ಕೇವಲ ಚಿಮಣಿ ಕೊಳವೆಗಳಾದರೆ ಸುಲಭವಾಗಿ ತೆಗೆಸಿಬಿಡಬಹುದು. ಆದರೆ ದೊಡ್ಡ ಹೊಗೆಗೂಡುಗಳನ್ನು ಮುಚ್ಚಲು ಕಟ್ಟಡದ ಮಾಲೀಕರು ಒಪ್ಪಿಗೆ ಕೊಡದಿರಬಹುದು. ಇಂತಹ ಸಂದರ್ಭದಲ್ಲಿ ಹೊಗೆಗೂಡಿನ ಮೇಲ್ಭಾಗವನ್ನು ಮುಚ್ಚಿ, ಹೊಗೆಗೂಡಿನ ಮುಂದೆ ಎತ್ತರದ (ತೆಳುವಾದದ್ದಾದರೂ ಸರಿ) ಗೋಡೆಯೊಂದನ್ನು ಕಟ್ಟಿಸಬೇಕು. ಆದರೆ ಹಾಗೆ ಮಾಡುವುದರಿಂದ, ಬ್ಯಾಂಕಿನಲ್ಲಿಯೇ ನಳಪಾಕ ತಯಾರಿಸುವ ಅವಕಾಶ ತಪ್ಪಿಹೋಗುತ್ತದೆ.

ಮಣ್ಣಿನ ಗೋಡೆಗಳನ್ನು ಹೊಂದಿದ್ದಾದರೆ, ಯಾವ ದಾಖಲೆಗಳನ್ನೂ ಗೋಡೆಗೆ ತಗುಲಿದಂತಿಡದೆ ಕಬ್ಬಿಣದ/ಮರದ ಕಪಾಟುಗಳಲ್ಲಿಡಬೇಕು. ಬ್ಯಾಂಕಿನ ಎಲ್ಲ ಬಾಗಿಲು

ಕಿಟಕಿಗಳಿಗೆ ಬಣ್ಣವನ್ನೂ ಮರದ ಸಾಮಾನುಗಳಿಗೆ ಪಾಲಿಷನ್ನೂ ಕಾಲಕಾಲಕ್ಕೆ ಹೊಡೆಯುವುದು ಸಂಸ್ಥೆಯ ಓರಣ ಸೌಂದರ್ಯಪ್ರಜ್ಞೆಗಳನ್ನು ತೋರಿಸುವುದೇ ಅಲ್ಲದೆ, ಲೋಹಗಳು ತುಕ್ಕು ಹಿಡಿಯುವುದನ್ನು, ಮರದ ವಸ್ತುಗಳು ಕ್ರಿಮಿಕೀಟಗಳಿಂದ ಕುಟ್ಟು ಅಥವಾ ಗೆದ್ದಲು ಹಿಡಿಯುವುದನ್ನು ತಪ್ಪಿಸುತ್ತದೆ.

ಕಟ್ಟಡದ ವಿದ್ಯುತ್ಪೂರೈಕೆಗಾಗಿ ಎಳೆದಿರುವ ತಂತಿಗಳು ವಿರಳವಾಗಿ ಗೋಡೆಯ ಒಳಗೆ ಹೊಂದಿಕೊಂಡಂತೆ ಇದ್ದರೆ ವಿದ್ಯುದಾಕಸ್ಮಿಕಗಳು ಹೆಚ್ಚಾಗಿ ಘಟಿಸುವುದಿಲ್ಲ.

ಕಾಗದಪತ್ರಗಳು ಗೆದ್ದಲು ಜಿರಲೆಗಳಿಗೆ ಪ್ರಿಯವಾದವಾದ್ದರಿಂದ ದಾಖಲೆಗಳನ್ನು ಸರಿಯಾಗಿ ಕಾಪಾಡದಿದ್ದಲ್ಲಿ, ಅವು ಕ್ರಮವಾಗಿ ನಾಮಾವಶೇಷವಾಗುತ್ತವೆ. ಇದರ ಸಲುವಾಗಿ, ಬ್ಯಾಂಕಿನಲ್ಲೂ ಕೀಟನಾಶಕಗಳನ್ನು ನಿಯತಕಾಲಿಕವಾಗಿ ಸಿಂಪಡಿಸುವುದು ಆವಶ್ಯಕ ಎನಿಸುತ್ತದೆ. ಕರೆನ್ಸಿ ನೋಟುಗಳ ರೂಪದ ನಗದು ಹಣ, ಆಭರಣಗಳು, ಇತರ ಅಮೂಲ್ಯ ವಸ್ತುಗಳು ಇವುಗಳನ್ನಿಡುವ ಕೊಠಡಿಯಂತೂ ರಕ್ಷಣೆಯ ದೃಷ್ಟಿಯಿಂದ ಬಹಳ ಮಹತ್ವದ್ದಾಗುತ್ತದೆ. ಇದರ ಪ್ರವೇಶಕ್ಕೆ ಈಚೆನಿಂದ ಎಷ್ಟು ಅಡೆತಡೆಗಳಿದ್ದರೆ ಅಷ್ಟು ಒಳ್ಳೆಯದು. ಒಂದು ಕೋಣೆಯ ಮೂಲಕ ಮಾತ್ರ ಹೋಗುವಂತಿದ್ದರೂ ಒಳ್ಳೆಯದೇ. ಇದರಿಂದ ಇದು ಈಚೆಗೆ ಸುಲಭವಾಗಿ ಗೋಚರಿಸುವುದಿಲ್ಲ. ಇದರ ಬಾಗಿಲುಗಳು ವಿಶೇಷ ಉಕ್ಕಿನಿಂದ ಮಾಡಲ್ಪಟ್ಟು ಅಭೇದ್ಯವಾಗಿರಬೇಕು. ಅಗತ್ಯವಿದ್ದಾಗ ಮಾತ್ರ ಇದರ ಬೀಗಗಳು ತೆರೆಯಲ್ಪಟ್ಟು ಉಳಿದಂತೆ ಹಾಕಿರಬೇಕು. ಕರೆನ್ಸಿ ನೋಟುಗಳಿಗೆ ಕ್ರಿಮಿಕೀಟಗಳಿಂದ ಹಾನಿಯಾಗದಂತೆ ಕ್ರಿಮಿನಾಶಕ ಪುಡಿಯನ್ನು ಕಾಲಿಕವಾಗಿ ಉದುರಿಸುತ್ತಿರಬೇಕು. ಈ ಕೊಠಡಿಯಲ್ಲಿ ಯಾವ ಕಾರಣದಿಂದಲೂ ಬೆಂಕಿ ಸೋಕದಂತೆ ನೋಡಿಕೊಳ್ಳಬೇಕು. ಬೇಕಾದಾಗ ಮಾತ್ರ ವಿದ್ಯುತ್ ಸಂಪರ್ಕ ಏರ್ಪಡಿಸಿಕೊಳ್ಳುವ ವ್ಯವಸ್ಥೆ ಇರಬೇಕು. ಈ ಕೊಠಡಿಯಲ್ಲಿರುವ ಗಾಳಿ ಕಿಂಡಿಗಳನ್ನು ಎಚ್ಚರಿಕೆಯಿಂದ ನಿರ್ಮಿಸಬೇಕು. ಇದು ಒಬ್ಬ ಮನುಷ್ಯ ಒಳಬರಲಾಗದಷ್ಟು ಗಾತ್ರದ ಕಿಂಡಿಗಳೇ ಆಗಿರಬೇಕು.

ಬ್ಯಾಂಕಿನ ಆಸ್ತಿಪಾಸ್ತಿಗಳನ್ನು ಸೂಕ್ತವಾದ ವಿಮಾ ಯೋಜನೆಗೆ ಒಳಪಡಿಸಿ ರಕ್ಷಣೆಯ ಭರವಸೆಯನ್ನು ಪಡೆಯಬೇಕು.

ಬೆಂಕಿ ಅಪಘಾತ ಅಕಸ್ಮಾತ್ ಘಟಿಸಿದಲ್ಲಿ ಅದನ್ನು ನಿವಾರಿಸುವ ಅಗ್ನಿ ನಿರೋಧಕ ಉಪಕರಣಗಳನ್ನು ಬ್ಯಾಂಕು ಹೊಂದಿರಬೇಕು. ಬ್ಯಾಂಕಿನ ರಕ್ಷಣಾ ಸಿಬ್ಬಂದಿಗೆ, ಯಾವ ಕಾರಣದಿಂದ (ಉದಾ : ವಿದ್ಯುತ್ತು, ಎಣ್ಣೆ, ಬೆಂಕಿಯ ಕಿಡಿ) ಬೆಂಕಿ ಹೊತ್ತಿಕೊಂಡರೆ ಯಾವ ರೀತಿ, ಯಾವ ಉಪಕರಣವನ್ನು ಬಳಸಿ ಬೆಂಕಿಯನ್ನು ನಿವಾರಿಸಬೇಕೆಂಬ ಬಗ್ಗೆ ಸೂಕ್ತ ತಿಳಿವಳಿಕೆ, ತರಬೇತಿಗಳನ್ನು ನೀಡಬೇಕು. ಸಾಧ್ಯವಾದಷ್ಟು ಮಟ್ಟಿಗೆ ಧೈರ್ಯ, ಸಮಯಪ್ರಜ್ಞೆ, ಪ್ರಾಮಾಣಿಕತೆಗಳೆಲ್ಲವನ್ನೂ ಹೊಂದಿರುವವರನ್ನೇ ರಕ್ಷಣಾ ಸಿಬ್ಬಂದಿಯನ್ನಾಗಿ ನೇಮಿಸಿಕೊಳ್ಳಬೇಕು.

ನಗದು ವ್ಯವಹಾರ ನಡೆಸುವ ಪ್ರತಿಯೊಬ್ಬ ವ್ಯಕ್ತಿಗೂ ಒಂದೊಂದು ಪ್ರತ್ಯೇಕ ಕಿರುಕೋಣೆ(ಕ್ಯೂಬಿಕಲ್)ಇರಬೇಕು. ಇದರ ಮೇಲ್ಭಾಗ ತೆರೆದಿದ್ದು ಸುತ್ತಲೂ ಕಬ್ಬಿಣದ ಸರಳುಗಳ ಬಲೆ ಹಾಗೂ ಮುಂಭಾಗದಲ್ಲಿ ಗಾಜಿನಿಂದ ಕೂಡಿ, ಗ್ರಾಹಕರು ಕೇವಲ ಗಾಜಿನ ಕಿಂಡಿಯಿಂದ ಮಾತ್ರ ವ್ಯವಹಾರ ನಡೆಸುವಂತಿರಬೇಕು. ಕಿಂಡಿಯಿಂದ ಕೈ ತೂರಿಸಿದರೆ, ನಗದಿಗಾರ ಇಟ್ಟುಕೊಂಡಿರುವ ಹಣ ಮುಂತಾದವು ಸಿಕ್ಕದಂತೆ, ಕಿಂಡಿಯ ಎತ್ತರ ಸ್ಥಾನದಲ್ಲಿ ಇರಬೇಕಾಗುತ್ತದೆ. ನಗದಿಗಾರನಿಗೆ ಕೋಣೆಯ ಬಾಗಿಲು, ಹಣ ಇಡುವ ಡ್ರಾಯರ್ ಮುಂತಾದವುಗಳನ್ನು ಸದಾ ಮುಚ್ಚಿರುವಂತೆಯೂ, ಯಾವುದೇ ಕಾರಣಕ್ಕಾಗಿ ಕೋಣೆಯಿಂದ ಆಚೆ ಹೋಗಬೇಕಾದರೂ ಅವುಗಳಿಗೆ ಬೀಗಹಾಕಿ ಆಚೆ ಹೊರಡುವಂತೆಯೂ ಸೂಚನೆಗಳನ್ನು ನೀಡಿರಬೇಕು. ಈ ಎಲ್ಲ ಕೋಣೆಗಳಿಗೂ ಮತ್ತು ಅವಶ್ಯವೆನಿಸಿದ ಇತರ ಸ್ಥಳಗಳಲ್ಲಿಯೂ ಅಪಾಯ ಸೂಚಕ ಶಬ್ದ ಅಥವಾ ಗಂಟೆ ಮೊಳಗಿಸುವ ಸ್ವಿಚ್ಚುಗಳನ್ನು ಹೊಂದಿಸಿರಬೇಕು. ಈ ಹೊಂದಾವಣೆ ಸ್ವಿಚ್ಚುಗಳು ಇತರರಿಗೆ ಕಾಣದಂತೆಯೂ ಆದರೆ ಸಿಬ್ಬಂದಿಗೆ ಸುಲಭವಾಗಿ ಎಟಕುವಂತೆಯೂ ಇರಬೇಕು. ಆಯುಧ ಸಜ್ಜಿತರಾದ ರಕ್ಷಣಾ ಸಿಬ್ಬಂದಿ ಸದಾಕಾಲವೂ ಶಾಖೆಯನ್ನು ನೋಡಿಕೊಳ್ಳುವ ವ್ಯವಸ್ಥೆ ಇರಬೇಕು. ಎಲ್ಲ ಬಗೆಯ ರಕ್ಷಣಾ ವ್ಯವಸ್ಥೆಗಳು ಸಮರ್ಪಕವಾಗಿವೆಯೇ ಎಂದು ಆಗಾಗ ಪರೀಕ್ಷಿಸುತ್ತಿದ್ದು, ನ್ಯೂನತೆಗಳು ಕಂಡುಬಂದಲ್ಲಿ ತತ್‌ಕ್ಷಣ ಅವನ್ನು ಸರಿಪಡಿಸಬೇಕು. ಹೆಚ್ಚಿನ ಪ್ರಮಾಣದ ನಗದು ಹಣ ಸಾರ್ವಜನಿಕರ ದೃಷ್ಟಿಗೆ ಬೀಳುವಂತೆ ಇಡಲ್ಪಡಬಾರದು. ಒಂದು ಶಾಖೆಯಿಂದ ಮತ್ತೊಂದು ಶಾಖೆಗೆ ಹಣ ರವಾನೆ ಮಾಡಬೇಕಾದರೆ, ಸಾಕಷ್ಟು ಸುರಕ್ಷಿತವಾದ ವಾಹನ, ಪೋಲೀಸ್ ರಕ್ಷಣೆ ಇರಬೇಕು.

ಇಷ್ಟೆಲ್ಲ ಕ್ರಮಗಳನ್ನು ಕೈಗೊಂಡರೂ, ಬಂದೂಕು ಸಹಿತರಾದ ದರೋಡೆಕೋರರ ದಾಳಿ ತಡೆಯಲು ಶಾಖಾ ಮಟ್ಟದಲ್ಲಿ ವ್ಯವಸ್ಥೆ ಇರುವುದಿಲ್ಲ. ಆದ್ದರಿಂದಲೇ ಇತ್ತೀಚೆಗೆ ಇಂತಹ ಪ್ರಕರಣಗಳು ಹೆಚ್ಚು ಹೆಚ್ಚಾಗಿ ವರದಿಯಾಗುತ್ತಿವೆ. ಬ್ಯಾಂಕಿಂಗ್ ವಲಯಕ್ಕೆ ಪ್ರತ್ಯೇಕವಾದ ರಕ್ಷಣಾ ಪಡೆಯನ್ನೇ ನೇಮಿಸುವ ಆವಶ್ಯಕತೆ ಕಂಡು ಬರುತ್ತಿದೆ. ಸರ್ಕಾರ ಕೂಡ ಈ ದಿಕ್ಕಿನಲ್ಲಿ ಚಿಂತಿಸುತ್ತಿದೆ ಎಂದು ವರದಿಗಳು ಬಂದಿವೆ. ಫಲಿತಾಂಶ ಕಾದು ನೋಡಬೇಕಾಗಿದೆ. ಇದರಿಂದ ಬ್ಯಾಂಕಿಂಗ್ ಸೇವೆ ಇನ್ನಷ್ಟು ತುಟ್ಟಿಯಾಗುತ್ತದೆ ಎಂಬುದನ್ನೂ ಗಮನಿಸದೆ ಇರುವಂತಿಲ್ಲ.

ದರೋಡೆಕೋರರು ಆಕ್ರಮಣವೆಸಗಿದಾಗ, ಈ ಕೆಲ ಅಂಶಗಳು ಸಿಬ್ಬಂದಿಯ ಮನಸ್ಸಿನಲ್ಲಿದ್ದರೆ ಒಳ್ಳೆಯದು ಎನಿಸುತ್ತದೆ :

1 ಸಾಧ್ಯವಾದಷ್ಟು ಕಾಲಹರಣ ಮಾಡುವುದು. ಇದರಿಂದ ದರೋಡೆಕೋರರ ಚಹರೆಯನ್ನು ಸೂಕ್ಷ್ಮವಾಗಿ ಗಮನಿ

ಸಲು ಅವಕಾಶ ಸಿಕ್ಕು, ಮುಂದೆ ಅವನನ್ನು ಗುರುತಿಸಲು ಸಹಾಯವಾಗುತ್ತದೆ.

2 ದರೋಡೆಕೋರ ಹೇಳಿದ್ದನ್ನು ಮಾತ್ರ ಪಾಲಿಸುವುದು. ಅನೇಕ ವೇಳೆ ದರೋಡೆಕೋರನಿಗೆ ಬ್ಯಾಂಕಿನ ಮಾಹಿತಿಗಳು ಪೂರ್ಣವಾಗಿ ದೊರಕಿರುವುದಿಲ್ಲ. ಅವನು ಹಣವನ್ನು ತೆಗೆದು ಚೀಲಕ್ಕೆ ತುಂಬಿ ಎಂದು ಅಜ್ಞಾಪಿಸಿದನೆನ್ನಿ. ಆಗ ಅವನು ತೋರಿದ ಹಣವನ್ನು (ಮಿಕ್ಕ ಹಣ ಇರುವುದು ಸಿಬ್ಬಂದಿಗೆ ಗೊತ್ತಿದ್ದರೂ ಅವನಿಗೆ ಗೊತ್ತಿರುವುದಿಲ್ಲ) ಮಾತ್ರ ತುಂಬಿ, ಮಿಕ್ಕದ್ದನ್ನಾದರೂ ಬ್ಯಾಂಕಿಗೇ ಉಳಿಸಿ ನಷ್ಟದ ಪ್ರಮಾಣವನ್ನು ಕಡಿಮೆ ಮಾಡಬಹುದು.

3 ಹಣ ತುಂಬಲು ದರೋಡೆಕೋರನಿಂದ ಅನುಜ್ಞೆ ಬಂದಾಗ, ಸಾಧ್ಯವಾದಷ್ಟು ಮಟ್ಟಿಗೆ ಕಡಿಮೆ ಮೌಲ್ಯದ ನೋಟುಗಳನ್ನು ತುಂಬಲು ಪ್ರಾರಂಭಿಸಬೇಕು. ಇದರಿಂದ ಕೂಡ ನಷ್ಟದ ಪ್ರಮಾಣ ಕಡಿಮೆ ಆಗುತ್ತದೆ.

ಒಟ್ಟಾರೆ ನಿಧಾನದಿಂದ ದರೋಡೆಕೋರರ ಆತಂಕವನ್ನು (ಅವರಿಗೆ ಇದು ಇದ್ದೇ ಇರುತ್ತದೆ) ಹೆಚ್ಚಿಸಿ ಅವರು ಹೆಚ್ಚು ತಪ್ಪೆಸಗಲು ಅನುವಾಗುತ್ತದೆ. ಅವರ ಒಂದೊಂದು ತಪ್ಪೂ ನಮಗೆ ಹೆಚ್ಚು ಹೆಚ್ಚು ಸಹಾಯಕ ಎಂಬುದು ಸ್ಪಷ್ಟ.

ಹಲವು ದರೋಡೆ ಪ್ರಕರಣಗಳಲ್ಲಿ ಸಿಬ್ಬಂದಿಯವರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಭಾಗಿಗಳಾಗಿರುವುದು ಕೂಡ ವರದಿಯಾಗಿದೆ. ಈ ವರದಿಗಳು ಸಿಬ್ಬಂದಿಯನ್ನು ನೇಮಿಸಿಕೊಳ್ಳುವಾಗ, ಅನಂತರ ಕೂಡ, ಹೆಚ್ಚು ಗಮನ ನೀಡಬೇಕೆಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ.

ಒಟ್ಟಾರೆ, ಬ್ಯಾಂಕುಗಳಲ್ಲಿನ ಭದ್ರತಾ ವ್ಯವಸ್ಥೆಯ ಬಗ್ಗೆ ಬ್ಯಾಂಕುಗಳು, ಸರ್ಕಾರ ಹಾಗೂ ಸಾರ್ವಜನಿಕರು ಎಲ್ಲರೂ ಗಂಭೀರವಾಗಿ ಚಿಂತಿಸುವ ಆವಶ್ಯಕತೆ ಇಂದು ಹಿಂದೆಂದಿಗಿಂತಲೂ ಹೆಚ್ಚಾಗಿದೆ.

# ಪರಕ್ರಾಮ್ಯ ಸಂಲೇಖಗಳು*

## ಅನುವಾದ : ಕಮ್ಮಟದ ಭಾಗಿಗಳು

ಬ್ಯಾಂಕಿಂಗ್ ಕ್ಷೇತ್ರಕ್ಕೆ ಹೊಸದಾಗಿ ಬಂದವನು Negotiable (ಪರಕ್ರಾಮ್ಯ) ಎಂಬ ಪದವನ್ನು Negotiable Instruments (ಪರಕ್ರಾಮ್ಯ ಸಂಲೇಖಗಳ) ಸಂದರ್ಭದಲ್ಲಿ ಮೊದಲ ಬಾರಿಗೆ ಕಂಡಾಗ ಆದರ ಅರ್ಥ ತಮಗೆ ತಿಳಿದಿದೆ ಎಂದು ಭಾವಿಸಬಹುದು.Negotiable ಎಂಬ ಪದ ಸಾಕಷ್ಟು ಪರಿಚಿತವಾಗಿದೆ. ವಿವಾದಗಳ ಇತ್ಯರ್ಥಕ್ಕಾಗಿ Negotiate (ಸಂಧಾನ) ಮಾಡಲಾಗುತ್ತದೆ. ನಿಮಗೆ ಕಾರನ್ನು ಮಾರುತ್ತಿರುವ ವ್ಯಕ್ತಿಯೊಂದಿಗೆ Negotiate (ಸಂಧಾನ) ಮಾಡುತ್ತೀರಿ. ಮತ್ತು ಈ ಪದವೇ ಸಹಜವಾಗಿ Negotiable (ಸಂಧಾನಾರ್ಹ) ಎಂಬುದಕ್ಕೆ ವಿಸ್ತೃತಗೊಂಡಿದೆ. ವ್ಯವಹಾರ ಮಾಡುತ್ತಿರುವ ಈ ಎರಡೂ ಪಕ್ಷಗಳ ಪೈಕಿ ಯಾವ ಪಕ್ಷವೇ ಆಗಲಿ ಬದಲಾಗುವುದಿಲ್ಲವೆಂಬಷ್ಟು ಮಟ್ಟಿಗೆ ತನ್ನ ಪ್ರಾರಂಭಿಕ ಸ್ಥಿತಿಗೆ ಬದ್ಧವಾಗಿರುವುದಿಲ್ಲ.

Negotiable Instruments ಅನ್ನು ಅರ್ಥಮಾಡಿಕೊಳ್ಳುವಲ್ಲಿ ಇದಾವುದರಿಂದಲೂ ಪ್ರಯೋಜನವಿಲ್ಲ. ಬದಲಿಗೆ ತೊಡಕಾಗಬಹುದು. ಬ್ಯಾಂಕಿಂಗಿಗೆ ಸಂಬಂಧಿಸಿದಂತೆ Negotiable ಎಂಬುದಕ್ಕೆ ವಿಶಿಷ್ಟವಾದ ಅರ್ಥ ಒಂದುಂಟು. ನಮ್ಮ ಈ ಹೊಸಬನ ವಿಶೇಷ ಗಮನ ಸೆಳೆಯುವಷ್ಟು ಮಟ್ಟಿಗೆ ಈ ಅರ್ಥ ಬ್ಯಾಂಕಿಂಗ್ ಅಧ್ಯಯನದಲ್ಲಿ ಪ್ರಾಮುಖ್ಯ ಹೊಂದಿದೆ.

ಸರಕು ಪಡೆದದ್ದಕ್ಕಾಗಿ ಫ್ರಾಂಕ್ 'ಬಿ'ಗೆ 50 ಪೌಂಡುಗಳನ್ನು ಕೊಡಬೇಕಾಗಿರುವ ಜೇಮ್ಸ್ 'ಎ'ಯ ವಿಚಾರವನ್ನು ತೆಗೆದುಕೊಳ್ಳಿ. ಹಣಕ್ಕಾಗಿ 'ಎ' ಮೇಲೆ 'ಬಿ' ದಾವೆ ಹೂಡಬಹುದು. 'ಎ' ವಿರುದ್ಧ ಕ್ರಮ ತೆಗೆದುಕೊಳ್ಳಲು ಅವನಿಗೆ ಹಕ್ಕುಂಟು. ಆದ್ದರಿಂದ ವಕೀಲರು ಋಣವನ್ನು 'ಕಾನೂನು ಕ್ರಮಕ್ಕೊಳಪಟ್ಟ ಆಸ್ತಿ'–ಎನ್ನುತ್ತಾರೆ. ಇದನ್ನು 'ಕ್ರಿಯೆಯಲ್ಲಿನ ವಸ್ತು' ಎಂದು ಪದಶಃ ಅನುವಾದಿಸುವ ಆಧುನಿಕ ಅಭ್ಯಾಸದಿಂದ ಏನೂ ಸ್ಪಷ್ಟಪಡಿಸಿದಂತಾಗುವುದಿಲ್ಲ. (ಸೀಸದ ಕಡ್ಡಿಯಿಂದ ಕಾರ್ಯ ನಿರ್ವಾಹಕನ ಜೆಟ್‌ವರೆಗೆ ಎಲ್ಲ ಭೌತಿಕ ವಸ್ತುಗಳನ್ನು ಸೂಚಿಸುವ 'ಸ್ವಾಧೀನತೆಯಲ್ಲಿನ ಸ್ವತ್ತು' ಎಂಬುದಕ್ಕೆ ವಿದೃಶವಾಗಿ ಇದನ್ನು ತೋರಿಸುವುದುಂಟು). 'ಬಿ'ಗೆ ತನ್ನದೇ ಆದ ಋಣಗಳಿವೆ. ಪೀಟರ್ 'ಎಕ್ಸ್'ಗೆ ಬಟವಾಡೆ ವಾಹನದ ಸಲುವಾಗಿ ನೀಡಬೇಕಾದ 75 ಪೌಂಡುಗಳು ಅಂತಹವುಗಳಲ್ಲಿ ಒಂದು. ಈ ಎಪ್ಪತ್ತೈದು ಪೌಂಡಿನ ಭಾಗಶಃ ಇತ್ಯರ್ಥಕ್ಕಾಗಿ 50 ಪೌಂಡುಗಳನ್ನು 'ಎಕ್ಸ್'ಗೆ ಪಾವತಿ ಮಾಡು ಎಂದು 'ಎ'ಗೆ ಹೇಳುವುದು ಒಳ್ಳೆಯ ಆಲೋಚನೆ ಎಂದು ತೋರುತ್ತದೆ. ಆವನು ಹೀಗೆಯೇ ಮಾಡುತ್ತಾನೆ. ತನ್ನ ಋಣವನ್ನು 'ಎಕ್ಸ್'ಗೆ ನಿಯೋಜಿಸುತ್ತಾನೆ. ಮತ್ತು 'ಎಕ್ಸ್'ಗೆ ಹೀಗೆ ಮಾಡಿದೆನೆಂದು ತಿಳಿಸುತ್ತಾನೆ. ಇಲ್ಲಿಯವರೆಗೆ 'ಎಕ್ಸ್' ತನ್ನ ಋಣವನ್ನು ಪಾವತಿ ಮಾಡಲು ನಿರಾಕರಿಸಿದರೆ ದಾವೆ ಹೂಡಬಹುದು.

ದುರದೃಷ್ಟವಶಾತ್ ಈಗ 'ಎ'ಗೆ 'ಬಿ' ವಿರುದ್ಧ ಬಂದು ಕ್ಲೈಮ್ ಇರುವುದು ಗೋಚರಿಸುತ್ತದೆ. ಪಡೆದ ಸರಕುಗಳು ತಾನು ಆದೇಶಿಸಿದ್ದಲ್ಲವೆಂದು ಸಿದ್ಧವಾಗಿದೆ. ಈ ಪರಿಸ್ಥಿತಿಯಲ್ಲಿ 'ಎ' 'ಎಕ್ಸ್'ಗೆ ಪಾವತಿ ನಿರಾಕರಿಸಿದರೆ ತನ್ನ ಕ್ಲೈಮ್ ಬಿದ್ದುಹೋಗಿದೆ ಎಂದು ಕಂಡುಕೊಳ್ಳುತ್ತಾನೆ. ಬಿ-ಎಕ್ಸ್ ನಿಯೋಜನೆ "ಮಾನ್ಯತೆಗೆ ಒಳಪಟ್ಟುದ್ದು" ಎಂದು ವಕೀಲರು ಹೇಳುತ್ತಾರೆ.

'ಬಿ'ಯ ವಿರುದ್ಧ 'ಎ'ಗೆ ಲಭ್ಯವಿರುವ ಎಲ್ಲ ಸಮರ್ಥನೆಗಳು 'ಎಕ್ಸ್' ವಿರುದ್ಧವಾಗಿಯೂ ಲಭ್ಯವಿರುತ್ತವೆ.

ಇದಕ್ಕೂ ಪರಕ್ರಾಮ್ಯತೆಗೂ ಏನು ಸಂಬಂಧ ? ಅಲ್ಲಿ 'ಎ-ಬಿ' ನಡುವೆ, 'ಬಿ-ಎಕ್ಸ್' ನಡುವೆ ಆದರ ಸಾಮಾನ್ಯ

* ಲಂಡನ್ನಿನ 'ಜರ್ನಲ್ ಆಫ್ ದಿ ಇನ್‌ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್'ನ 1981ರ ಜೂನ್ ಸಂಚಿಕೆಯ *Negatiable Irstruments* ಎಂಬ ಲೇಖನದ ಅನುವಾದ

ಅರ್ಥದಲ್ಲಿ ಒಂದು ಪರಕ್ರಾಮಣವಂತೂ (Negotiation) ಸ್ಪಷ್ಟವಾಗಿಯೇ ಜರುಗಿದೆ. ಆದರೆ ನಮ್ಮ ವಿಶೇಷ ಅರ್ಥದಲ್ಲಿ ಏನೂ ಜರುಗಿಲ್ಲ.

'ಬಿ'ಗೆ 'ಎ' 50 ಪೌಂಡುಗಳ ಚೆಕ್ಕನ್ನು ಕೊಟ್ಟಿದ್ದರೆ ಪರಿಸ್ಥಿತಿ ಬೇರೆ ಇರುತ್ತಿತ್ತು. ಏಕೆಂದರೆ, 'Negotiable' ಎಂಬ ವಿಶಿಷ್ಟಾರ್ಥದಲ್ಲಿ ಚೆಕ್ಕು ಒಂದು Negotiable Instrument (ಪರಕ್ರಾಮ್ಯ ಸಂಲೇಖ) ಆಗಿದೆ. ಈ ಹೊತ್ತಿಗಾಗಲೇ 'ಬಿ' ಚೆಕ್ಕನ್ನು ಹಿಂಬರಹ ಮಾಡಿ 'ಎಕ್ಸ್'ಗೆ ಕೊಡುತ್ತಾನೆ. 'ಎಕ್ಸ್' ಅದನ್ನು ತನ್ನ ಖಾತೆಗೆ ಜಮಾ ಮಾಡುತ್ತಾನೆ. ತನಗೆ ಬೇರೆ ಸರಕುಗಳು ಬಂದಿವೆ ಎಂಬುದನ್ನು ಕಂಡುಕೊಂಡ 'ಎ' ಚೆಕ್ಕಿನ ಪಾವತಿಯನ್ನು ತಡೆದಿದ್ದಾನೆ. ಆದರೆ 'ಎಕ್ಸ್' (ಅಥವಾ ಬಹುಶಃ 'ಎಕ್ಸ್'ನ ಸಲಹಾ ವಕೀಲರು) ಚೆಕ್ಕು ಪಾವತಿಯನ್ನು ಬೇಡಿ ಪತ್ರ ಬರೆದಾಗ, ಸರಕನ್ನು ಕುರಿತ ವಿವಾದ ಈಗ ತನಗೊಂದು ಸಮರ್ಥನೆಯ ಅಂಶವಾಗಲಾರದೆಂದು, ಚೆಕ್ಕಿನ ಮೇಲೆ ತಾನೆ ಹೊಣೆಯೆಂದು ತನ್ನ ಸಲಹಾ ವಕೀಲರಿಂದಲೇ ಅರಿತುಕೊಳ್ಳುತ್ತಾನೆ.

ಇದೇ ಪರಕ್ರಾಮ್ಯ ಸಂಲೇಖದ ಪ್ರಮುಖ ಲಕ್ಷಣ. ಅಂದರೆ ರಚಕನಾಗಲಿ, ಪ್ರಾಪ್ತಿಕರ್ತನಾಗಲಿ ಆಗಿರದ ಮೂರನೆ ಕಕ್ಷಿಯೊಬ್ಬ ಪರಕ್ರಾಮ್ಯ ಸಂಲೇಖದ ಮೇಲೆ ನ್ಯೂನತೆಗಳಿಂದ ಮುಕ್ತವಾದ ಅಧಿಕಾರವನ್ನು ಪಡೆಯಬಹುದು. ತನಗೆ ವರ್ಗಾಯಿಸಿದ ಕಕ್ಷಿಯ ಹಕ್ಕು ಕುಂದಾಗಿದ್ದರೂ, ಆತ ಹಕ್ಕನ್ನು ಚಲಾಯಿಸಲು ಸಾಧ್ಯವಾಗದಿದ್ದರೂ ಮೂರನೆಯ ಕಕ್ಷಿ ತನ್ನ ಸ್ವಾಮ್ಯದ ಹಕ್ಕನ್ನು ಚಲಾಯಿಸಬಹುದು.

ಪರಕ್ರಾಮ್ಯ ಸಂಲೇಖದಲ್ಲಿ ಹಲವು ರೂಪಗಳಿವೆ. ಇನ್ನೊಂದು ಲೇಖನದಲ್ಲಿ ಇದನ್ನು ಚರ್ಚಿಸಬಹುದಾಗಿದೆ. ಇವುಗಳಲ್ಲಿ ಅತ್ಯಂತ ಹಿಂದಿನದು ಹುಂಡಿ (Bill of Exchange). ಚೆಕ್ಕು ಇದರ ವಿಶಿಷ್ಟೀಕೃತ ರೂಪ. ಚೆಕ್ಕುಗಳಿಗೆ ಸಂಬಂಧಿಸಿದ 1957ರ ಚೆಕ್ಕುಗಳ ಅಧಿನಿಯಮವೂ ಸೇರಿದಂತೆ, 1882ರ ಹುಂಡಿ ಅಧಿನಿಯಮದಲ್ಲಿ (Bill of Exchange Act, 1882) ಇವೆರಡನ್ನೂ ಕುರಿತ ಮೂಲ ಕಾನೂನು ಕಾಣಬಹುದಾಗಿದೆ. ಎಲ್ಲ ಪರಕ್ರಾಮ್ಯ ಸಂಲೇಖಗಳ ಪೈಕಿ ಚೆಕ್ಕು ಅತ್ಯಂತ ಹೆಚ್ಚು ಬಳಕೆಯಲ್ಲಿದೆ ಎಂಬುದು ನಿರ್ವಿವಾದ. ಬ್ಯಾಂಕಿಂಗ್ ವ್ಯವಹಾರದಲ್ಲಿ ಚೆಕ್ಕುಗಳಿಗೆ ಸಂಬಂಧಿಸಿದ ಕಲಾಪವೇ ಬಹು ದೊಡ್ಡ ಭಾಗವಾಗಿದೆ. ಇಂಗ್ಲೆಂಡ್ ಮತ್ತು ವೇಲ್ಸ್‌ಗಳಲ್ಲಿ ತೀರುವೆ ಮನೆಗಳು ವರ್ಷಕ್ಕೆ 140 ಕೋಟಿಗೂ ಅಧಿಕ ಸಂಖ್ಯೆಯ ಚೆಕ್ಕುಗಳನ್ನು ನಿರ್ವಹಿಸುತ್ತವೆ. ಉದರಿ ಕಾರ್ಡು ಮತ್ತು ಬ್ಯಾಂಕ್ ಗೀರೋ ಉದರಿಗಳ ಉಪಯೋಗ ಹೆಚ್ಚುತ್ತಿದ್ದಾಗ್ಯೂ ಚೆಕ್ಕುಗಳ ಒಟ್ಟು ಸಂಖ್ಯೆ ವಾರ್ಷಿಕವಾಗಿ ಹೆಚ್ಚುತ್ತಲೇ ಇದೆ.

ಚೆಕ್ಕುಗಳು ಮತ್ತು ಇತರ ಎಲ್ಲಾ ಪರಕ್ರಾಮ್ಯ ಸಂಲೇಖಗಳ ವಿಚಾರದಲ್ಲಿ ನ್ಯೂನತೆಗಳಿಂದ ಮುಕ್ತವಾದ ವರ್ಗಸಾಧ್ಯತೆ ಕೆಲವು ನಿಯಮಗಳಿಗೆ ಒಳಪಟಿರುತ್ತದೆ. ಮೂರನೆಯ ಕಕ್ಷಿ—ನಮ್ಮ 'ಎಕ್ಸ್'—ಸಂಲೇಖಕ್ಕೆ ಪ್ರತಿಫಲವನ್ನು ಅಂದರೆ ಮೌಲ್ಯವನ್ನು ('ಬಿ'ಯಿಂದ 'ಎಕ್ಸ್'ನ ಬಟವಾಡೆ ವಾಹನದ ಉಪಯೋಗ) ಕೊಟ್ಟಿದ್ದಿರಬೇಕು. ಮತ್ತು ಅವನು ಸಂಲೇಖವನ್ನು ಸದ್ಭಾವನೆಯಿಂದ ತೆಗೆದುಕೊಂಡಿರಬೇಕು, ಅಂದರೆ ಯಾವ ವ್ಯಕ್ತಿಯಿಂದ ಸಂಲೇಖವನ್ನು ಪಡೆಯುತ್ತಾನೋ ಅವನ ಹಕ್ಕು ದೋಷಯುಕ್ತವಾಗಿದೆ ಎಂಬುದು ಅವನಿಗೆ ಗೊತ್ತಿರಬಾರದು. ಔಪಚಾರಿಕತೆಯಿಂದ ವಿಮುಕ್ತವಾಗಿರುವುದು ಪರಕ್ರಾಮ್ಯ ಸಂಲೇಖದ ಮತ್ತೊಂದು ಪ್ರಧಾನ ಅಂಶ. ಮೊದಲನೆಯ ಕಕ್ಷಿಯಾದ ರಚಕನಿಗೆ ವರ್ಗಾವಣೆಯ ಬಗ್ಗೆ ತಿಳಿಸಲಾಗಿದೆಯೇ ಎಂಬುದನ್ನು ಮೂರನೆಯ ಕಕ್ಷಿಯ ಹಕ್ಕು ಅವಲಂಬಿಸಿರುವುದಿಲ್ಲ. (ಅಂದರೆ ಋಣವನ್ನು ಕೇವಲ ನಿಯೋಜಿಸಿದಾಗ ಹೀಗಿರುತ್ತದೆ.) ಹಿಂಬರಹದ ಅಗತ್ಯವಿರುವ ಸಂದರ್ಭಗಳನ್ನು ಬಿಟ್ಟು ಇತರ ಸಂದರ್ಭಗಳಲ್ಲಿ ಕಾನೂನುಸಂಬಂಧಿಯಾದ ಯಾವುದೇ ಔಪಚಾರಿಕತೆಯಿಲ್ಲದೆ ಕೇವಲ ವರ್ಗಾವಣೆಯಿಂದ ಸಂಲೇಖವನ್ನು ವರ್ಗಾಯಿಸಬಹುದಾಗಿದೆ.

ಹಿಂಬರಹ ಯಾವಾಗ ಅಗತ್ಯವಾಗುತ್ತದೆ ? ಸಂಲೇಖದ ಸ್ವಾಮ್ಯದ ಹಕ್ಕನ್ನು ವರ್ಗಾಯಿಸುವುದು ಇದರ ಉದ್ದೇಶ, ಆದುದರಿಂದ ಇದು ಸಂಲೇಖದ ಪರಕ್ರಾಮಣದ ಅವಶ್ಯ ಭಾಗವಾಗಿರುತ್ತದೆ. ಪ್ರಾಪ್ತಿಕರ್ತನು ಸಂಲೇಖದ ಹಿಂಬದಿಯಲ್ಲಿ ಮಾಡುವ ಬರೇ ಸಹಿಯೇ ಸಾಮಾನ್ಯವಾಗಿ ಚೆಕ್ಕಿನ ಹಿಂಬರಹ ಎನಿಸಿಕೊಳ್ಳುತ್ತದೆ. ಆದರೆ, ಇದು ಯಾರು ಬದಲಿ ಪ್ರಾಪ್ತಿಕರ್ತನಾಗಬೇಕೆಂಬುದರ ಸೂಚನೆಯೂ ಆಗಬಹುದು. ಈ ಹಿಂದೆಯೂ ಹಲವೊಮ್ಮೆ ಹೀಗೆಯೇ ಇತ್ತು. ಸಹಿ ಮಾತ್ರವೇ ಇದ್ದರೆ ಅದು ಖಾಲಿ ಹಿಂಬರಹವಾಗುತ್ತದೆ. ಆದರಿಂದ ಸಂಲೇಖವು ವಾಹಕನಿಗೆ ಪಾವತಿಯೋಗ್ಯವಾಗುತ್ತದೆ. 'ಬಿ'ಯ ಖಾಲಿ ಹಿಂಬರಹದ ಚೆಕ್ಕನ್ನು 'ಎಕ್ಸ್' ಮತ್ತೊಬ್ಬ ಕಕ್ಷಿ ಜಾನ್ 'ಕ್ಯೂ'ಗೆ ಹಸ್ತಾಂತರ ಮಾಡಲು ಇಚ್ಛಿಸಿದ್ದರೆ 'ಬಿ'ಯ ಸಹಿಗೆ ತನ್ನ ಸಹಿಯನ್ನು ಸೇರಿಸುವ ಅಗತ್ಯ (ಯಾವುದಾದರೂ ಪ್ರಮಾದವಾದರೆ 'ಎಕ್ಸ್'ನೂ ಸಹ ಚೆಕ್ಕಿನ ಮೇಲೆ ಹೊಣೆಯಾಗುವುದನ್ನು ಖಾತರಿಗೊಳಿಸಿಕೊಳ್ಳಲು ಅವನು ಸಹಿ ಮಾಡಬೇಕೆಂದು ಒತ್ತಾಯಿಸಬಹುದಾಗಿದ್ದರೂ ಕೂಡ) ಇರುತ್ತಿರಲಿಲ್ಲ. ಆದರೆ 'ಬಿ' ಏನಾದರೂ ಒಂದೊಮ್ಮೆ ಚೆಕ್ಕಿನ ಹಿಂಬದಿಯಲ್ಲಿ ಪೀಟರ್ 'ಎಕ್ಸ್'ಗೇ ಪಾವತಿಸಿ ಎಂದು ಬರೆದು ಫ್ರಾಂಕ್ 'ಬಿ' ಎಂದು ಸಹಿ ಹಾಕಿದಿದ್ದರೆ ಆಗ 'ಎಕ್ಸ್' ಅದನ್ನು ತನ್ನ ಖಾತೆಗೆ ಜಮಾ ಮಾಡಲಿಕ್ಕಾಗಲಿ 'ಕ್ಯೂ'ಗೆ ವರ್ಗಾಯಿಸುವುದಕ್ಕಾಗಲಿ ಮೊದಲು ತಾನೇ ಹಿಂಬರಹ ಮಾಡಬೇಕಾಗಿ ಬರುತ್ತಿತ್ತು.

ಫ್ರಾಂಕ್ 'ಬಿ'ಗೆ ಅಥವಾ ಆದೇಶಕ್ಕೆ ಪಾವತಿಸಿ, ಅರ್ಥಾತ್ ಫ್ರಾಂಕ್ 'ಬಿ'ಗೆ ಪಾವತಿಸಿ ಅಥವಾ/ಬದಲಿಗೆ ಅವನು ಯಾರಿಗೆ ಪಾವತಿ ಮಾಡಬೇಕೆಂದು ನಿಮಗೆ ಆದೇಶಿಸುತ್ತಾನೋ ಅವನಿಗೆ ಪಾವತಿಸಿ ಎಂಬ, ಸಾಂಪ್ರದಾಯಿಕ

ರೂಪದ ಎಲ್ಲ ಆದೇಶ ಚೆಕ್ಕುಗಳಿಗೆ, ಚೆಕ್ಕುಗಳ ಅಧಿನಿಯಮವನ್ನು ಜಾರಿಗೆ ತರುವ ವರೆಗೆ ಹಿಂಬರಹ ಅಗತ್ಯವಾಗಿತ್ತು. ಇಂದು ಅಪರೂಪವಾಗಿ ಕಾಣಬರುವ ರೂಪವೊಂದಿದೆ: ಫ್ರ್ಯಾಂಕ್ 'ಬಿ' ಅಥವಾ ವಾಹಕನಿಗೆ ಪಾವತಿಸಿ ಎಂಬುದದು. (ಕೆಲವೊಮ್ಮೆ ಚೆಕ್ಕಿನ ರಚಕನು 'ಆದೇಶಕ್ಕೆ' ಎಂಬ ಮುದ್ರಿತ ಪದವನ್ನು 'ವಾಹಕನಿಗೆ' ಎಂದು ಬದಲಾಯಿಸಿ ಈ ಬದಲಾವಣೆಗೆ ಸಹಿ ಹಾಕಬಹುದು.) ಅಂತಹ ಸಂಲೇಖದ ಸ್ವಾಮ್ಯದ ಹಕ್ಕನ್ನು ವರ್ಗಾಯಿಸಲು ಹಿಂಬರಹ ಎಂದೂ ಅಗತ್ಯವಿಲ್ಲ. ಏಕೆಂದರೆ ಚೆಕ್ಕು ಯಾರ ವಶದಲ್ಲಿರುತ್ತದೆಯೋ ಅವನೇ ಪಾವತಿ ಪಡೆಯಬೇಕಾದ ವಾಹಕನೆಂಬುದು ನಿರ್ವಿವಾದ.

ಕುತೂಹಲದ ಸಂಗತಿ ಎಂದರೆ ನಾವು ಈ ವರೆಗೆ ವಿವರಿಸಲು ಶ್ರಮಿಸಿದ ಪರಕ್ರಾಮ್ಯತೆಯ ಗುಣವು ಬ್ಯಾಂಕಿಂಗ್ ವ್ಯವಸ್ಥೆಯ ಮೂಲಕ ಹಾದು ಹೋಗುವ ಲಕ್ಷಾಂತರ ಚೆಕ್ಕುಗಳ ಪೈಕಿ ಅಲ್ಪ ಸಂಖ್ಯೆಯವಕ್ಕೆ ಸಂಬಂಧಿಸಿದಂತೆ ಮಾತ್ರ ಮುಖ್ಯವಾದುದು. ಬಹುತೇಕ ಚೆಕ್ಕುಗಳನ್ನು ಅವುಗಳ ಪ್ರಾಪ್ತಿಕರ್ತರ ಖಾತೆಗಳಿಗೆ ಜಮಾ ಮಾಡಲಾಗುತ್ತದೆ. ಚೆಕ್ಕಿನ ಸ್ವಾಮ್ಯದ ಹಕ್ಕಿನ ವರ್ಗಾವಣೆಯ ಪ್ರಶ್ನೆ ಉದ್ಭವಿಸುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಹಿಂಬರಹಗಳು ಯಾವ ವಾಸ್ತವ ಉದ್ದೇಶವನ್ನೂ ಪೂರೈಸುವುದಿಲ್ಲ ಎಂಬ ಮನವರಿಕೆಯೇ ಚೆಕ್ಕುಗಳ ಅಧಿನಿಯಮದ ಒಂದನೇ ಪ್ರಕರಣಕ್ಕೆ ಪ್ರೇರಣೆ ನೀಡಿತು. ಬ್ಯಾಂಕುಗಳು ಸುರಕ್ಷಿತ ಎಂದುಕೊಂಡದ್ದಕ್ಕಿಂತ ಈ ಪ್ರಕರಣ ಹೇಗೆ ಮುಂದೆ ಹೋಗಿದೆ ಎಂಬುದರ ಕಥೆಯನ್ನು ಇನ್ನೊಂದು ಲೇಖನದಲ್ಲಿ ವಿವರಿಸಬಹುದು. ಹಾಗೆಯೇ 'ಪರಕ್ರಾಮ್ಯವಲ್ಲ' ಎಂಬುದನ್ನು ಚೆಕ್ಕಿನ ರೇಖಣಕ್ಕೆ ಸೇರಿಸುವುದರ ಮಹತ್ವವನ್ನು ಮತ್ತೊಂದು ಲೇಖನದಲ್ಲಿ ವಿವರಿಸಬಹುದು. ಇಲ್ಲಿ ಪ್ರಾಪ್ತಿಕರ್ತರ ಖಾತೆಗಳಿಗೆ ಜಮೆ ಮಾಡಲಾದ ಚೆಕ್ಕುಗಳಿಗೆ 1957 ರಿಂದೀಚೆಗೆ ಹಿಂಬರಹ ಅಗತ್ಯವಾಗಿಲ್ಲ ಎಂದಷ್ಟೇ ಹೇಳಿದರೆ ಸಾಕು.

ಆದರೆ ಇಂದಿಗೂ ಪರಕ್ರಾಮ್ಯತೆಯೇ ವಿಷಯದ ಮೂಲವಾಗಿದೆ. ಇತರ ಪರಕ್ರಾಮ್ಯ ಸಂಲೇಖಗಳನ್ನೇ ಅಲ್ಲದೆ ಅನೇಕ ಚೆಕ್ಕುಗಳನ್ನು ಇಂದೂ ಪರಕ್ರಾಮಿಸಲಾಗುತ್ತಿದೆ. ಹೀಗಾಗಿ 'ಬಿ'ಯ ಖಾಲಿ ಹಿಂಬರಹವನ್ನೊಳಗೊಂಡ 'ಎ' ಯ ಚೆಕ್ಕು 'ಎಕ್ಸ್'ಗೆ ತಲಪುವ ಮುನ್ನ ಕಳವಾಗಿದ್ದು, ಕೊಂಡದ್ದಕ್ಕೆ ಪಾವತಿಯಾಗಿ ಆ ಚೆಕ್ಕನ್ನು ಸ್ವೀಕರಿಸಬೇಕೆಂದು ಅಂಗಡಿಕಾರನಾದ 'ಜೋ ಗೀ'ಯನ್ನು ಕದ್ದವನು ಒಡಂಬಡಿಸಿದ್ದೇ ಆದರೆ 'ಎ' ಪಾವತಿ ಮಾಡಬೇಕೆಂದು ಗೀಯು ಒತ್ತಾಯಿಸಲು ಅರ್ಹನಾಗಿರುತ್ತಾನೆ. ಬೇಹುಷಾರಿ ವ್ಯಕ್ತಿಗಳಿಗೆ—ಕೆಲವೊಮ್ಮೆ ಬೇಹುಷಾರಿ ಬ್ಯಾಂಕರರಿಗೂ ಸಹ—ಚೆಕ್ಕು ತೊಡಕುಗಳನ್ನು ಒಡ್ಡುತ್ತದೆ.

---

ಸಣ್ಣ ಉಳಿತಾಯ ಯೋಜನೆಯ ಇನ್ನೊಂದು ಆಕರ್ಷಕ ಉಳಿತಾಯ

## 10 ವರ್ಷಗಳ ಸಾಮಾಜಿಕ ಭದ್ರತಾ ಸರ್ಟಿಫಿಕೇಟುಗಳು

- ಅಧಿಕ ಬಡ್ಡಿಯೊಂದಿಗೆ ವಿಮಾ ಸಂರಕ್ಷಣೆ.
- ಹತ್ತು ವರ್ಷಗಳಲ್ಲಿ ನಿಮ್ಮ ಹಣ ಮೂರು ಪಟ್ಟಾಗುತ್ತದೆ.
- ಅವಧಿಯ ಮೊದಲೇ ಠೇವಣಿದಾರ ಮೃತಿ ಹೊಂದಿದ್ದಲ್ಲಿ ವಾರೀಸುದಾರರಿಗೆ ವಾಯಿದೆಯ ಪೂರ್ಣ ಮೌಲ್ಯವನ್ನು ಕೊಡಲಾಗುತ್ತದೆ.
- ಸರ್ಟಿಫಿಕೇಟುಗಳು ರೂ. 500 ಮತ್ತು ರೂ. 1,000 ಗುಣಾಂಕಗಳಲ್ಲಿ ದೊರೆಯುತ್ತವೆ.
- ರೂ. 500 ಸರ್ಟಿಫಿಕೇಟು 10 ವರ್ಷಗಳಲ್ಲಿ ರೂ. 1,500 ಆಗುತ್ತದೆ. ಒಬ್ಬ ವ್ಯಕ್ತಿ ರೂ. 5,000 ವರೆಗೆ ವಿನಿಯೋಗಿಸಬಹುದು.

ಹೆಚ್ಚಿನ ವಿವರಗಳಿಗೆ ಸಮೀಪದ ಅಂಚೆ ಕಚೇರಿಯಲ್ಲಿ ಅಥವಾ ಸಣ್ಣ ಉಳಿತಾಯದ ಅಧಿಕೃತ ಏಜೆಂಟರಲ್ಲಿ ವಿಚಾರಿಸಿರಿ.

ಸಣ್ಣ ಉಳಿತಾಯದ ನಿರ್ದೇಶನಾಲಯ

ವಿಶ್ವೇಶ್ವರಯ್ಯ ಕೇಂದ್ರ

ಬೆಂಗಳೂರು–560 001

ದೂರವಾಣಿ : 26470 ಅಥವಾ 72785

# ಮಧ್ಯಮ ಹಾಗೂ ದೀರ್ಘ ಅವಧಿಗಳ ಸಾಲ ಮೂಲ್ಯಾಂಕನದಲ್ಲಿ ಕೈಗಾರಿಕಾ ಪರಿಣತರ ಬಳಕೆ*

ಮೂಲ : ಎಂ. ಜೆ. ರಾಬ್ಬಿ

ಅನುವಾದ: ಕಮ್ಮಟದ ಭಾಗಿಗಳು

ಅಷ್ಟೇನೂ ದೊಡ್ಡವಲ್ಲದ ಕಂಪನಿಗಳಿಗೆ ನೀಡುವ ಅವಧಿ ಸಾಲಗಳದು ಈಗ ಬ್ಯಾಂಕ್ ಧನಪೋಷಣೆಯ ಒಂದು ಸ್ವೀಕೃತ ರೂಪವಾಗಿದೆ. ಬ್ಯಾಂಕುಗಳು ಹೆಚ್ಚು ಹೆಚ್ಚು ಅವಧಿ ಸಾಲ ನೀಡಲು ಈಗ ಒಪ್ಪುತ್ತಿವೆ. ಅತಿ ಸಣ್ಣ ಕಂಪನಿಗಳಿಗೆ 5ರಿಂದ 7 ವರ್ಷಗಳ ವರೆಗಿನ ಅವಧಿ ಸಾಲ ನೀಡುವುದು ಹಾಗೂ ಭದ್ರತಾ ಮೀಸಲನ್ನು ಪ್ರತೀಕ್ಷಿಸುವುದು ಬ್ಯಾಂಕುಗಳ ಸಾಮಾನ್ಯ ಪ್ರವೃತ್ತಿಯಾಗಿದ್ದರೂ ಮಿಡ್ ಲೆಂಡ್ ಬ್ಯಾಂಕ್ ಇಪ್ಪತ್ತು ವರ್ಷಗಳ ಅವಧಿ ಸಾಲ ಯೋಜನೆಯನ್ನು ಸಾರ್ವಜನಿಕವಾಗಿ ಘೋಷಿಸಿದೆ.

ದೀರ್ಘತರ ಅವಧಿಯ ಸಾಲ ನೀಡಿಕೆಯನ್ನು ಶೀಘ್ರವಾಗಿ ವಿಸ್ತರಿಸುವಲ್ಲಿ ಬ್ಯಾಂಕುಗಳು ಹಲವಾರು ನಿರ್ಬಂಧಗಳಿಗೆ ಒಳಗಾಗಿವೆ. ಅವುಗಳ ಠೇವಣಿ ಬುನಾದಿಯ ಸ್ವರೂಪ ಅಲ್ಪಾವಧಿಯೆಂಬುದೂ ಒಂದು ಪ್ರಮುಖ ಅಂಶ. ಬ್ಯಾಂಕುಗಳ ಸಾಲ ನೀಡುವ ಸಾಮರ್ಥ್ಯಕ್ಕಾಗಲಿ, ಇಚ್ಛೆಗಾಗಲಿ ಈ ನಿರ್ಬಂಧಕ ಅಂಶಗಳ ಪೈಕಿ ಕೆಲವು ನೇರವಾಗಿ ಸಂಬಂಧಿಸಿಲ್ಲ. ಆದರೆ ಅವಕ್ಕೆ ಕಂಪನಿಗಳೇ ಕಾರಣ. ಬ್ಯಾಂಕು ಅವಧಿ ಸಾಲವನ್ನು ನೀಡುವ ಬಗ್ಗೆ ನಿರ್ಣಯ ತೆಗೆದುಕೊಳ್ಳಲು ಅಗತ್ಯವಾದ ಬಗೆಯ ಮಾಹಿತಿಯನ್ನು ಒದಗಿಸಲು ಅಥವಾ ಸಾಕಷ್ಟು ಆಧಾರವನ್ನು ಒದಗಿಸಲು ಅವು ಅಸಮರ್ಥವಾಗಿವೆ.

ಆದ್ದರಿಂದ ಬ್ಯಾಂಕುಗಳು ತಮ್ಮ ಅವಧಿ ಸಾಲ ವಲಯವನ್ನು ವಿಸ್ತರಿಸಲು ನಿರ್ಬಂಧಕವಾಗಿ ಅನೇಕ ಅಂಶಗಳು ಕೂಡಿ ಕೆಲಸ ಮಾಡುತ್ತವೆ.

ಆದರೆ ಪ್ರತಿ ಸಂದರ್ಭಕ್ಕೂ ಯುಕ್ತ ಗಮನ ನೀಡುವುದನ್ನು ಹಾಗೂ ತೀರ್ಮಾನ ತೆಗೆದುಕೊಳ್ಳುವುದನ್ನು ಸುಧಾರಿಸಲು ಯಾವ ಪ್ರಾಯೋಗಿಕ ಕ್ರಮಗಳನ್ನು ಕೈಗೊಳ್ಳಬಹುದು ?

ಮಧ್ಯಮಾವಧಿ ಹಾಗು ದೀರ್ಘಾವಧಿ ಸಾಲಕ್ಕೆ ಸಂಬಂಧಿಸಿದಂತೆ ಒಂದು ಸಾಲವನ್ನು ನೀಡಿದ ಕೂಡಲೆ ಹಾಗೂ ಒಂದು ಸಮ್ಮತ ಅವಧಿಯಲ್ಲಿ ಅದರ ಮರುಪಾವತಿ ಆಗತಕ್ಕದ್ದೆಂದು ಎರಡೂ ಪಕ್ಷಗಳು ಒಪ್ಪಿಕೊಂಡ ಕೂಡಲೆ ಸಾಮಾನ್ಯವಾಗಿ ಬ್ಯಾಂಕು ಅಪಾಯಸಂಭವಕ್ಕೆ ಸಂಪೂರ್ಣವಾಗಿ ಒಳಗಾಗುತ್ತದೆ. ಸಾಮಾನ್ಯವಾಗಿ ಮರುಪಾವತಿಯ ಆಕರವೆಂದರೆ ಈಗಾಗಲೇ ಉಳಿಸಿದ ಲಾಭದಿಂದ ಉತ್ಪನ್ನವಾದ ಹಣ. ಸಾಲ ಮಂಜೂರಾದ ಒಂದು ವರ್ಷದ ಅನಂತರ ಕಡಿಮೆ ಲಾಭವನ್ನು ತೋರಿಸುವ ಅಥಾವೆ ಪತ್ರವನ್ನು ಬ್ಯಾಂಕಿಗೆ ಸಲ್ಲಿಸಿದ್ದೇ ಆದರೆ ಉದ್ಯಮವನ್ನು ಒಂದು ಪೇಚಿನ ಸ್ಥಿತಿಗೆ ಸಿಲುಕಿಸದೆ, ತನ್ನ ಅಪಾಯಸಂಭವವನ್ನು ಕಡಿಮೆ ಮಾಡಿಕೊಳ್ಳಲು ಬ್ಯಾಂಕಿಗೆ ಕಷ್ಟವಾಗುತ್ತದೆ. ಇಂಥ ಪರಿಸ್ಥಿತಿಯನ್ನು ತಪ್ಪಿಸಲು ಬ್ಯಾಂಕು ಭಾವೀ ಲಾಭಗಳ ಸಾಧ್ಯತೆಯ ಮಟ್ಟಗಳನ್ನು ಹಾಗೂ ಮಾರಾಟದ ಇಳಿತದಿಂದ ವ್ಯವಹಾರದ ಆಧಾರದ ಮೇಲೆ ಆಗಬಹುದಾದ ಪರಿಣಾಮವನ್ನು ಆರಂಭದಲ್ಲಿಯೇ ಪರಿಗಣಿಸುವುದರ ಸಂಭಾವ್ಯತೆ ಹೆಚ್ಚು. ಸ್ಥಿರವಾದ ಬೆಳೆವಣಿಗೆಯುಳ್ಳ ಒಂದು ಸಾರ್ವಜನಿಕ ಕಂಪನಿಯಲ್ಲಿ ಇದನ್ನು ಅತ್ಯಂತ ನಿಷ್ಕೃಷ್ಟವಾಗಿ ಸಾಧಿಸಬಹುದು. ಆದರೆ ಏರಿಳಿತದ ಬೆಳೆವಣಿಗೆ ಹಾಗೂ ಅಸ್ಥಿರ ಲಾಭವುಳ್ಳ ಸಣ್ಣ ಕಂಪನಿಯ ವಿಷಯದಲ್ಲಿ ಕಷ್ಟವಾಗುತ್ತಿದೆ.

---

* ಮೂಲ: ಲಂಡನ್ನಿನ ಜರ್ನಲ್ ಆಫ್ ದಿ ಇನ್ಸ್ಟಿಟ್ಯೂಟ್ ಆಫ್ ಬ್ಯಾಂಕರ್ಸ್ ಆಗಸ್ಟ್ 1980ರ ಸಂಚಿಕೆಯಲ್ಲಿ ಪ್ರಕಟವಾಗಿರುವ *Using Idustry Experts in Medium and Long Term Loan Appraisal* ಲೇಖನ

**ವಿವೇಕಯುತ ಹಣಕಾಸು ಹತೋಟಿ**

ಭವಿಷ್ಯದ ಹಣಕಾಸು ಅಗತ್ಯಗಳನ್ನು ಪ್ರಕ್ಷೇಪಿಸುವುದರಲ್ಲಿ ಹಾಗೂ ಕಂಪನಿಯೊಂದರ ವ್ಯವಸ್ಥಾಪನೆ ವಿವೇಕಯುತ ಹಣಕಾಸು ಹತೋಟಿಯನ್ನು ಚಲಾಯಿಸುತ್ತಿದೆ ಎಂಬುದನ್ನು ಖಾತರಿ ಪಡಿಸುವುದರಲ್ಲಿ ನಿರ್ವಹಣ ಲೆಕ್ಕ ಪದ್ಧತಿ ಪಾತ್ರವಹಿಸಬೇಕಾದ್ದು ಈ ಸಂದರ್ಭದಲ್ಲಿ. ಬಾರ್ಕ್ಲೇಸ್ ಮತ್ತು ಲಾಯ್ಡ್ ಬ್ಯಾಂಕುಗಳು ವ್ಯಾಪಾರ ಸಲಹಾ ಸೇವೆಗಳನ್ನು ಪ್ರಾರಂಭಿಸಿರುವುದು, ಅವು ಅಷ್ಟೇನೂ ದೊಡ್ಡವಲ್ಲದ ಕಂಪನಿಗಳನ್ನು ಈ ದಿಸೆಯಲ್ಲಿ ಪ್ರೋತ್ಸಾಹಿಸುವಲ್ಲಿ ಹೊಂದಿರುವ ಕಾಳಜಿಯ ದ್ಯೋತಕ.

ಆದಾಗ್ಯೂ ಮಧ್ಯಮ ಮತ್ತು ದೀರ್ಘಾವಧಿ ಸಾಲ ನೀಡುವಾಗ ಬ್ಯಾಂಕರ್ ಪರಿಗಣಿಸಬೇಕಾದ್ದೆಂದರೆ ಸುನಿರ್ಮಿತ ಪ್ರತೀಕ್ಷೆಗಳ (ಬಜೆಟ್) ವ್ಯವಸ್ಥೆಯನ್ನು ಕುರಿತ ಪ್ರಶ್ನೆಯೊಂದೇ ಅಲ್ಲ. ವ್ಯವಹಾರ ನಡೆದು ಬಂದ ದಾರಿಯ ದಾಖಲೆ. ಇಂದಿಗೂ ಅದರ ಭವಿಷ್ಯತ್ತಿನ ಬಗ್ಗೆ ಮೌಲ್ಯ ನಿರ್ಧಾರಣ ಮಾಡುವಾಗ ಅದರ ವ್ಯವಸ್ಥಾಪನೆಯ ಗುಣ ಮಟ್ಟದ ಬಗ್ಗೆಯೂ ಮೌಲ್ಯ ನಿರ್ಧಾರಣ ಮಾಡುತ್ತಾನೆ ಎಂಬುದರಲ್ಲಿ ಒಂದು ಅರ್ಥವಿದೆ. ಹಣಕಾಸಿನ ಹತೋಟಿ ಮುಖ್ಯ. ಆದರೆ ಭವಿಷ್ಯದ ಯಶಸ್ಸಿಗೆ ಕಾರಣವಾಗುವ ಅಂಶಗಳಲ್ಲಿ ಅದು ಒಂದು ಮಾತ್ರ. ವ್ಯವಹಾರವೊಂದು ಯಶಸ್ವಿಯಾಗಬೇಕಾದರೆ ಅದು ಉತ್ಪಾದಿಸಬೇಕು ಮತ್ತು ಲಾಭದಾಯಕವಾಗಿ ಮಾರಬೇಕು. ಹಣಕಾಸಿನ ಪ್ರಕ್ಷೇಪಗಳಲ್ಲಿ ವ್ಯಕ್ತಗೊಳಿಸಿರುವ ಪ್ರಮಾಣಗಳಲ್ಲಿ ಅದು ಉತ್ಪಾದಿಸಲು ಮತ್ತು ಮಾರಲು ಅಸಮರ್ಥವಾದರೆ ಅವಧಿ ಸಾಲದ ಸೇವೆ ಗಂಡಾಂತರಕ್ಕೊಳಗಾಗಬಹುದು. ಆದುದರಿಂದ ಅವಧಿ ಸಾಲದ ಮೌಲ್ಯನಿರ್ಧಾರಣ ಎರಡು ರೂಪಗಳನ್ನು ತಳೆಯಬೇಕಾಗುತ್ತದೆ :

1 ಅದು ವ್ಯವಹಾರದ ಹಣಕಾಸಿನ ಸ್ಥಿತಿಯ ಹಾಗೂ ಅವಧಿ ಸಾಲ ನೀಡುವಿಕೆಯ ಹಣಕಾಸು ಪರಿಣಾಮಗಳ ಮೌಲ್ಯನಿರ್ಧಾರಣವಾಗಿರಬೇಕಾಗುತ್ತದೆ. (ನಿರ್ದಿಷ್ಟವಾಗಿ ಮುಂಭಾವಿಸಿದ ನಗದು ಹರಿವಿಗೆ ಸಂಬಂಧಿಸಿದಂತೆ ಆದಾಯ ಸಜ್ಜಿನ ಪರಿಣಾಮ)

2 ಅದು ವ್ಯವಹಾರದ ನಿರ್ವಹಣೆ, ಕಂಪನಿಯ ಉತ್ಪನ್ನಗಳಿಗೆ ಅಥವಾ ಸೇವೆಗಳಿಗೆ ಬರಬಹುದಾದ ಬೇಡಿಕೆ—ಇವುಗಳ ಮೌಲ್ಯನಿರ್ಧಾರಣವೂ ಆಗಿರಬೇಕಾಗುತ್ತದೆ.

ಈ ಪರಿಗಣನೆಗಳು ಪರಸ್ಪರ ಸಂಬಂಧಿಯಾದವು ಎಂಬುದು ನಿಸ್ಸಂದೇಹ. ಅವಧಿ ಸಾಲದ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದರ ಹಣಕಾಸು ಪರಿಣಾಮಗಳನ್ನು ನಿರ್ಧರಿಸುವ ಮುಂಚೆ ಉತ್ಪನ್ನ, ಅದರ ಮಾರುಕಟ್ಟೆ ಮತ್ತು ವ್ಯವಸ್ಥಾಪನೆಯ ಸಾಮರ್ಥ್ಯ ಇವುಗಳ ಬಗ್ಗೆ ನಾನಾ ಊಹೆಗಳನ್ನು ಮಾಡಲಾಗುತ್ತದೆಂದು ಬ್ಯಾಂಕರರನೇಕರು ವಾದಿಸಲೂಬಹುದು. ಕಾರ್ಯತಃ ಈ ಊಹೆಗಳು ಅನೇಕ ಸಲ ಅನುಕ್ತವಾಗಿಹೋಗುತ್ತವೆ, ಅಥವಾ ಸಂದರ್ಶನವೊಂದರಲ್ಲಿನ ಅನಿಸಿಕೆ, ಹಣಕಾಸು ವ್ಯವಹಾರ ನಡೆದು ಬಂದ ದಾರಿಯ ದಾಖಲೆ—ಇವುಗಳ ಮೇಲೆ ಬಹು ಮಟ್ಟಿಗೆ ಆಧರಿತವಾಗಿರುತ್ತವೆ. ಅನೇಕ ಸಲ ಬ್ಯಾಂಕ್ ವ್ಯವಸ್ಥಾಪಕ ತನ್ನ ಪ್ರಾರಂಭಿಕ ಅನಿಸಿಕೆಗಳನ್ನು ವ್ಯವಹಾರ ಸ್ಥಳಕ್ಕೆ ನೀಡಿದ ಭೇಟಿಯೊಂದರಿಂದ ಪುಷ್ಟೀಕರಿಸಿಕೊಳ್ಳುತ್ತಾನೆ. ಈ ಭೇಟಿಯ ಉಪಯುಕ್ತತೆ, ಯಶಸ್ವಿ ವಾಣಿಜ್ಯೋದ್ಯಮಿಗಳ 'ವಾಸನೆ' ಹಿಡಿಯುವ ಕಲೆಯನ್ನು ಅನೇಕ ಅನುಭವಿ ಬ್ಯಾಂಕ್ ವ್ಯವಸ್ಥಾಪಕರು ಬೆಳಸಿಕೊಂಡಿದ್ದಾರೆಂಬ ಸಂಗತಿ—ಈ ಎರಡನ್ನೂ ಕಡಿಮೆಯೆಂದೆಣಿಸಬಾರದು. ಆದಾಗ್ಯೂ ಸಾಲ ನೀಡಿಕೆ ದೀರ್ಘಾವಧಿಯದೂ ಹೆಚ್ಚು ಸ್ಪರ್ಧಾತ್ಮಕವೂ ಆಗುತ್ತಿರುವಲ್ಲಿ ಕರಡು ಋಣ (ಬ್ಯಾಡ್ ಡೆಟ್) ಅನುಪಾತಗಳನ್ನು ಇಂದಿನ ಮಟ್ಟಗಳಲ್ಲೇ ಉಳಿಸಿಕೊಳ್ಳಬೇಕಾದರೆ ಹೆಚ್ಚುವರಿ ತಂತ್ರಗಳನ್ನು ಅನ್ವೇಷಿಸಲೇಬೇಕು.

ಕೆಲವು ಈಚಿನ ಉನ್ನತ ತಂತ್ರವಿದ್ಯಾತ್ಮಕ ಕೈಗಾರಿಕೆಗಳ ವ್ಯವಹಾರದಲ್ಲಿ ತೊಡಗುತ್ತಿರುವಂತಹ ಜನರು, ಮೇಲು ನೋಟಕ್ಕಾದರೂ, ಹಿಂದಿನ ವ್ಯಾಪಾರಿಗಳು ಅಥವಾ ಇಂಜನಿಯರುಗಳಿಗಿಂತ ಬಹಳ ಭಿನ್ನವೆಂದು ತೋರುತ್ತಾರೆ. ಸಾಲ ನೀಡಿಕೆ ದೀರ್ಘಕಾಲಿಕವಾಗುತ್ತಿದ್ದಂತೆ ಬ್ಯಾಂಕ್ ವ್ಯವಸ್ಥಾಪಕರ "ವಾಸನಾಗ್ರಹಣ ಶಕ್ತಿಯ" ಸೂಕ್ಷ್ಮತೆ ಹಲವಾರು ಸಂದರ್ಭಗಳಲ್ಲಿ ತೀವ್ರ ಪರೀಕ್ಷೆಗೆ ಒಳಗಾಗಬಹುದು. ಉದಾಹರಣೆಗೆ ಬ್ಯಾಂಕ್ ವ್ಯವಸ್ಥಾಪಕನೊಬ್ಬ ಪರಿಣತ ಎಲೆಕ್ಟ್ರಾನಿಕ್ಸ್ ಕಂಪನಿಯೊಂದರಿಂದ ಅವಧಿ ಸಾಲಕ್ಕಾಗಿ ಬಂದ ಕೋರಿಕೆಯೊಂದನ್ನು ಎದುರಿಸಬೇಕಾಗಿದ್ದಾಗ ಅದರ ಸಂಘಟನೆ ಮತ್ತು ಹಣಕಾಸು ಯೋಜನೆಯ ಬಗ್ಗೆ ಹಾಗೂ ಅದು ತನ್ನ ಬಗ್ಗೆ ಸ್ಪಷ್ಟವಾಗಿ ನಿರೂಪಿಸಿಕೊಳ್ಳುತ್ತಿದೆ ಎಂಬ ಸಂಗತಿಯ ಬಗ್ಗೆ ಅವನಿಗೆ ಮನದಟ್ಟಾದರೂ, ಅದು ಏನು ತಯಾರಿಸುತ್ತಿದೆ ಅಥವಾ ಅದರ ಉತ್ಪನ್ನಗಳಿಗೆ ಯಾವ ರೀತಿಯ ಮಾರುಕಟ್ಟೆಯಿದೆ ಎಂಬುದರ ಬಗ್ಗೆ ಖಚಿತವಾದ ತಿಳಿವಳಿಕೆ ನಿಜಕ್ಕೂ ಅವನಿಗೆಆಗದು.

ಅವನು ತನಗೆ ತಾನೆ ಎರಡು ಪ್ರಶ್ನೆಗಳನ್ನು ಕೇಳಿಕೊಳ್ಳಬಹುದು :

'ಹೊಸ ಯಂತ್ರೋಪಕರಣ ಮತ್ತು ದುಡಿಯುವ ಬಂಡವಾಳದ ಸಾಲಕ್ಕಾಗಿ ಬಂದ ಕೋರಿಕೆ ನ್ಯಾಯವಾದುದೆ? ಅಥವಾ ಸಾಮ್ಯ ಷೇರು ಹಣಕಾಸು ಪೂರೈಕೆ ಹೆಚ್ಚು ಯುಕ್ತವಾಗಿರುವಂತೆ ಮಾಡುವುದರ, ಅಪರೀಕ್ಷಿತ ಮಾರುಕಟ್ಟೆಯ ಕಡೆಗೆ ಕಂಪನಿ ಹೋಗುತ್ತಿದೆಯೆ ? ಮತ್ತು 'ಈ ವರ್ಷ 50% ಮತ್ತು ಮುಂದಿನ ವರ್ಷ 25%ರಷ್ಟು ಅಧಿಕ ಮಾರಾಟವನ್ನು ಕಂಪನಿ ನಿಜವಾಗಿ ಹೆಚ್ಚಿಸಲಿದೆಯೆ ?'

**ಒಂದು ಸ್ವತಂತ್ರ ಅಭಿಪ್ರಾಯ**

ಉದ್ಯಮಪತಿಗಳು ತಮ್ಮ ಯೋಜನೆಗಳ ಬಗ್ಗೆ ನೀಡುವ ವಿವರಣೆಯ ಮೇಲೆ ಬ್ಯಾಂಕ್ ವ್ಯವಸ್ಥಾಪಕರು

ಹೆಚ್ಚಾಗಿ ಅವಲಂಬಿಸಿರುತ್ತಾರೆ. ಕಾರ್ಖಾನೆಗೆ ಭೇಟಿ ಮತ್ತು ಆದೇಶ ಪುಸ್ತಕದ ಅವಲೋಕನ ಇದರಿಂದ ಪರಿಸ್ಥಿತಿಯ ಸ್ಪಷ್ಟೀಕರಣಕ್ಕೆ ಸಹಾಯವಾಗಬಹುದು. ಆದರೆ ಕೆಲವೊಮ್ಮೆ ವಸ್ತುನಿಷ್ಠವಾದ ಹಾಗೂ ತಿಳಿವಳಿಕೆಯಿಂದ ಕೂಡಿದ ಅಭಿಪ್ರಾಯವನ್ನು ಅವನು ಸ್ವಾಗತಿಸುತ್ತಾನೆ.

ಸಾಲ ಸಾಕಷ್ಟು ಗಾತ್ರದ್ದಾಗಿದ್ದ ಪಕ್ಷದಲ್ಲಿ, ಬ್ಯಾಂಕಿನ ವಿಶೇಷಜ್ಞರಾದ ಸಾಂಸ್ಥಿಕ ಸಾಲಿಗರನ್ನು ಆಹ್ವಾನಿಸಲಾಗುವುದು. ಆಗ ಅವರಿಗೆ ಅದೇ ಸಮಸ್ಯೆ ಎದುರಾಗುತ್ತದೆ. ಮತ್ತು ವ್ಯವಸ್ಥಾಪನೆಯಲ್ಲಿ ಅತ್ಯಂತ ಸಮರ್ಥವಾದದ್ದು ಎಂಬುದನ್ನು ಮನವರಿಕೆ ಮಾಡಿಕೊಳ್ಳಲು ಮತ್ತು ಅದೇನು ಮಾಡುತ್ತಿದೆ ಎಂಬುದನ್ನು ನಿಖರವಾಗಿ ತಿಳಿಯುವುದಕ್ಕೂ ಅವರು ಪ್ರಯತ್ನಿಸಬಹುದು. ಪರ್ಯಾಯವಾಗಿ, ವ್ಯವಹಾರ ಅಥವಾ ಮಾರಾಟ ಸಲಹೆಗಾರರನ್ನು ಆಹ್ವಾನಿಸಬೇಕೆಂದು ಅವರು ಉಪಾಯವಾಗಿ, ಆದರೆ ದೃಢವಾಗಿ ಉದ್ಯಮಿಗೆ ಸಲಹೆ ಮಾಡಬಹುದು. ಮತ್ತು ಅವರ ಹಣಕಾಸು ಬೆಂಬಲವು, ಸಲಹೆಗಾರರ ವರದಿಯಿಂದ ಪ್ರಭಾವಿತವಾಗಬಹುದು. ಸಾಲ ನೀಡಿಕೆಯೊಂದೇ ತರವಲ್ಲವೆಂದು, ಸಾಮ್ಯಷೇರುಗಳ ನೀಡಿಕೆಯ ಮೂಲಕ ಭಾಗಶಃ ಹಣವನ್ನು ಸಂಗ್ರಹಿಸಬೇಕೆಂದು ಮತ್ತು ಮಧ್ಯಮಾವಧಿಯ ಸಾಲ ಹಾಗೂ ಬ್ಯಾಂಕ್ ಮೀರೆಳತದಿಂದ ಉಳಿದ ಹಣಕಾಸಿನ ಒದಗಣೆಯಾಗಬೇಕೆಂದು ಕೂಡ ಅವರು ಭಾವಿಸಬಹುದು. ಬ್ಯಾಂಕುಗಳು ವಿಧಿಸುವ ಬಡ್ಡಿದರಗಳು ಹೆಚ್ಚು ನಷ್ಟ ಸಂಭವಿಸುವ ವಲಯಗಳಿಗೆ ಅವಕಾಶ ಮಾಡಿಕೊಡುವುದಿಲ್ಲ ಎಂಬುದು ಸ್ಪಷ್ಟ. ಸಾಹಸೋದ್ಯಮ ಬಂಡವಾಳ ಅಥವಾ ಅಭಿವೃದ್ಧಿ ಬಂಡವಾಳದಲ್ಲಿ ಪರಿಣತಿ ಹೊಂದಿದ ಉಪಕಂಪನಿಯ ಮೂಲಕ ಈ ವ್ಯವಹಾರಗಳನ್ನು ಕೈಗೊಳ್ಳಬೇಕು. ನಷ್ಟ ಸಂಭವವನ್ನು ಸರಿದೂಗಿಸುವುದಕ್ಕಾಗಿ ಆದರ ಬಂಡವಾಳ ಬೆಳವಣಿಗೆಯಲ್ಲಿ ಬ್ಯಾಂಕು ಪಾಲ್ಗೊಳ್ಳಬಹುದು.

ಲೆಕ್ಕಿಗ ಮತ್ತು ಹಣಕಾಸು ಸಲಹೆಗಾರರ ಬಳಕೆಗಿಂತ ವ್ಯವಹಾರ ಮತ್ತು ಮಾರಾಟ ಸಲಹೆಗಾರರ ಬಳಕೆ ಭಿನ್ನವಲ್ಲ. ವ್ಯವಹಾರ ಅಥವಾ ತಾಂತ್ರಿಕ ತಜ್ಞ ಉತ್ಪನ್ನದ ಗುಣವನ್ನು ದೃಢೀಕರಿಸಿದ್ದಾನೆ, ಅಥವಾ ಉತ್ಪಾದನ ಸಲಹೆಯನ್ನು ನೀಡುತ್ತಿದ್ದಾನೆ, ಅಥವಾ ಉತ್ಪನ್ನ ವಿನ್ಯಾಸದ ಬಗ್ಗೆ ಸಲಹೆಗಳನ್ನು ನೀಡುತ್ತಿದ್ದಾನೆಂದು ವಾದಿಸಬಹುದು. ಮಾರಾಟ ಸಲಹೆಗಾರರು ನಿರ್ದೇಶಕರ ಮಾರಾಟ ಯೋಜನೆಯ ಹೊಂದಾಣಿಕೆ ಸಾಮರ್ಥ್ಯದ ನಿರ್ಧಾರಣ ಮಾಡಲು ಸಹಾಯ ಮಾಡಬಹುದು.

ಹೊರಗಿನವರ ಅಭಿಪ್ರಾಯವನ್ನು ತೆಗೆದುಕೊಳ್ಳುವ ಪರಿಕಲ್ಪನೆ ಮೊದಮೊದಲು ಬ್ಯಾಂಕ್ ವ್ಯವಸ್ಥಾಪಕನಿಗೆ ವಿಚಿತ್ರವೆಂದು ತೋರಬಹುದು. ಇನ್ನಷ್ಟು ತೀವ್ರವಾಗಿ ಪರಿಶೀಲಿಸಿದಾಗ ಅದು ಅಷ್ಟು ವಿಚಿತ್ರವೆಂದು ನಿಜಕ್ಕೂ ತೋರಲಾರದು. ಏಕೆಂದರೆ ಕೃಷಿ ಸಾಲ ನೀಡಿಕೆಯಲ್ಲಿ ಅನೇಕ ವರ್ಷಗಳಿಂದ ಇಂಥದೇ ಪದ್ಧತಿಯನ್ನು ಅನುಸರಿಸಲಾಗಿದೆ. ಕೃಷಿ ಕ್ಷೇತ್ರಗಳಲ್ಲಿನ ಬ್ಯಾಂಕ್ ವ್ಯವಸ್ಥಾಪಕರುಗಳಿಗೆ ಕೃಷಿ ಅಭಿವೃದ್ಧಿ ಮತ್ತು ಸಲಹಾ ಸೇವಾ ಸಂಸ್ಥೆ ಸುಪರಿಚಿತವಾಗಿದೆ. ರೈತ ಮತ್ತು ಬ್ಯಾಂಕರರ (ಅಥವಾ ಕೃಷಿ ಅಡಮಾನ ನಿಗಮದ) ಪರಸ್ಪರ ಒಪ್ಪಂದದ ಮೇರೆಗೆ ಕೃಷಿ ಅಭಿವೃದ್ಧಿ ಮತ್ತು ಸಲಹಾ ಸೇವೆಯ ಪಾತ್ರದಲ್ಲಿ ಕಾರ್ಯಪ್ರವೃತ್ತವಾಗಲು ಮತ್ತು ನಗದು ಸ್ಥಿತಿಯ ಮುನ್ಸೂಚನೆಗಳನ್ನು ತಯಾರಿಸುವಲ್ಲಿ ನೆರವು ನೀಡಲು ಸಹ ಆಗಾಗ್ಗೆ ಕರೆಯಲಾಗಿದೆ. ಕೆಲವು ನಿರ್ದಿಷ್ಟ ಕೈಗಾರಿಕೆಗಳಲ್ಲಿ ಇಂಥವೇ ಸೇವೆಗಳನ್ನು ಸಲ್ಲಿಸುವ ಸಂಸ್ಥೆಗಳಿವೆ. ಲಾಭೋದ್ದೇಶವಿಲ್ಲದ ಉತ್ಪಾದನೆ ಮತ್ತು ಮಾರಾಟ ಸಂಶೋಧನ ಸಂಸ್ಥೆಗೆ ಉತ್ಪಾದನ ಇಂಜನಿಯರಿಂಗ್ ಸಂಘ ಒಂದು ಉದಾಹರಣೆ.

ಸಣ್ಣ ಉದ್ಯಮಗಳ ಮಾಹಿತಿ ಕೇಂದ್ರಗಳು ನೀಡುವ ಸೌಲಭ್ಯಗಳನ್ನು ಅತಿ ಸಣ್ಣ ಉದ್ಯಮಗಳಿಗೂ ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳಬಹುದು. ಹಲವು ಪ್ರಮುಖ ನಗರಗಳಲ್ಲಿ ಇವುಗಳ ಕಛೇರಿಗಳಿವೆ. ಕಚ್ಚಾ ಸಾಮಗ್ರಿ ಪೂರೈಕೆಯ ಮೂಲಗಳು, ವಿಶೇಷೀಕೃತ ಯಂತ್ರೋಪಕರಣ ಮತ್ತು ಹಲವು ವಿಭಿನ್ನ ಕ್ಷೇತ್ರಗಳಲ್ಲಿ ತಜ್ಞ ಸಲಹಾ ಮೂಲಗಳು ಇಂಥವನ್ನು ಕುರಿತ ವ್ಯಾಪಕ ಮಾಹಿತಿಯ ಬ್ಯಾಂಕು ಪ್ರತಿಯೊಂದು ಕಛೇರಿಯಲ್ಲೂ ಇರುತ್ತದೆ. ಕೈಗಾರಿಕಾ ಇಲಾಖೆ ಈ ಸೇವೆಯನ್ನು ಉಚಿತವಾಗಿ ಒದಗಿಸುತ್ತದೆ.

ಈ ಕೇಂದ್ರಗಳಿಗೆ ಸೇರಿದಂತೆ, ಸಣ್ಣ ಸಂಸ್ಥೆಗಳಿಗೆ ಸಲಹೆ ನೀಡುವ ೧೪೦ ಮಂದಿ ಇದ್ದಾರೆ. ಇವರೆಲ್ಲ ಅನುಭವಿಗಳಾದ ನಿವೃತ್ತ ಉದ್ದಿಮೆದಾರರು. ಸಣ್ಣ ಉದ್ಯಮಕ್ಕೆ ನೆರವು ನೀಡಲು ಕೈಗಾರಿಕೆ ಇವರನ್ನು ನೇಮಿಸಿಕೊಂಡಿದೆ. ಈ ಸಲಹೆಗಾರರಲ್ಲಿ ಅನೇಕರು ಮಾರಾಟಗಾರಿಕೆ, ಉತ್ಪಾದನೆ ಅಥವಾ ಹಣಕಾಸು ವಿಚಾರದಲ್ಲಿ ವಿಶೇಷ ಪರಿಣತಿ ಹೊಂದಿರುತ್ತಾರೆ. ತನ್ನ ಸಮಸ್ಯೆಗಳನ್ನು ಗುರುತಿಸಲು ಅಥವಾ ಭವಿಷ್ಯದ ಯೋಜನೆಗಳನ್ನು ತಯಾರಿಸಲು ಉದ್ಯಮದಾರನಿಗೆ ಇವರು ನೆರವು ನೀಡಬಲ್ಲವರಾಗಿರುತ್ತಾರೆ. ಮೊದಲ ಬಾರಿಯ ಸಲಹೆ ಉಚಿತ, ಮುಂದಿನ ಬಾರಿಯ ಸಲಹೆಗಳು ಅಧಿಕ ಸಹಾಯಧನ ಪೋಷಿತ. ಈ ಸಲಹೆಗಾರರು ಸ್ವತಃ ನೆರವು ನೀಡಲಾಗದಿದ್ದರೆ ಉದ್ಯಮ ಅಥವಾ ವ್ಯವಸ್ಥಾಪನ ಸಲಹೆಗಾರರ ಸಂಪರ್ಕವನ್ನು ತಪ್ಪದೆ ಪಡೆಯುತ್ತಾರೆ.

### ಮತ್ತೊಂದು ಮೂಲ

ತಂತ್ರಕಲಾಶಾಲೆಗಳು ಹಾಗೂ ತಂತ್ರಶಾಸ್ತ್ರ ವಿಶ್ವವಿದ್ಯಾನಿಲಯಗಳು ಸಲಹೆ ನೀಡಿಕೆಯ ಪಾತ್ರವನ್ನು ಕೂಡ ನಿರ್ವಹಿಸಬಲ್ಲವು. ಕೆಲವು ಶಿಕ್ಷಣ ಸಂಸ್ಥೆಗಳು ನಿರ್ದಿಷ್ಟವಾಗಿ ಸಲಹಾ ಕಂಪನಿಗಳನ್ನು ಸ್ಥಾಪಿಸಿವೆ. ಎದುರಾಗುವ ಪ್ರತಿಯೊಂದು ಸಮಸ್ಯೆಗೂ ಸಂಬಂಧಿಸಿದ ಜ್ಞಾನ ಮತ್ತು

ಕೌಶಲವುಳ್ಳ ಸಿಬ್ಬಂದಿಯನ್ನು ಅವರು ಸಂಪರ್ಕಿಸಬಲ್ಲರು. ವಿಶ್ವವಿದ್ಯಾಲಯಗಳ ವಿದ್ವಾಂಸರು ಮತ್ತು ಹಿರಿಯ ವಿದ್ಯಾರ್ಥಿಗಳು ಅಥವಾ ಸ್ನಾತಕೋತ್ತರರು ಸಹ ನಿಜವಾದ ಸಮಸ್ಯೆಗಳನ್ನು ನೇರವಾಗಿ ಎದುರಿಸಲು ಅವಕಾಶಗಳನ್ನು ಸ್ವಾಗತಿಸುತ್ತಾರೆ. ಅರ್ಹತೆಯ ಮಟ್ಟದಲ್ಲಿ ಭಾರಿ ವ್ಯತ್ಯಾಸ ಗಳಿರಬಹುದಾದರೂ ಈ ಬಗೆಯ ಸಂಬಂಧಗಳನ್ನು ಅನ್ವೇಷಿಸುವುದು ಕೆಲ ವೇಳೆ ಗ್ರಾಹಕನ ಸ್ವಂತ ಹಿತದೃಷ್ಟಿ ಯಿಂದ ಅಗತ್ಯ. ತನ್ನ ಉತ್ಪನ್ನಗಳಿಗೆ ಹೊಸ ಮಾರುಕಟ್ಟೆ ಗಳನ್ನು ಅನ್ವೇಷಿಸಬಯಸುವಾಗ ಇದು ನಿರ್ದಿಷ್ಟವಾಗಿ ಯುಕ್ತವೆನಿಸುತ್ತದೆ.

### ಕೈಗಾರಿಕಾ ಪರಿಣತರು

ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲದ ಮೌಲ್ಯಾಂಕನಕ್ಕೆ ಬಾಹ್ಯ ಅಭಿಕರಣಗಳನ್ನು ಒಳಪಡಿಸು ವುದರಿಂದ ವ್ಯಥಾ ಕಾಲವ್ಯಯವೂ, ದುಬಾರಿ ವೆಚ್ಚವೂ ಆಗುತ್ತವೆ. ಆದಾಗ್ಯೂ ಉದ್ಯಮ, ಅದರ ನಿರ್ವಹಣೆ ಮತ್ತು ಅದರ ಭವಸಾಮರ್ಥ್ಯವನ್ನು, ಅದರಲ್ಲೂ ಮುಖ್ಯ ವಾಗಿ ಇತ್ತೀಚಿನ ಉನ್ನತ ತಂತ್ರವಿದ್ಯಾತ್ಮಕ ಕೈಗಾರಿಕಾ ಕ್ಷೇತ್ರಗಳಲ್ಲಿ ಬೆಳೆಯುತ್ತಿರುವ ಉದ್ಯಮಗಳಿಗೆ ಸಂಬಂಧಿಸಿ ದಂತೆ ಬೆಲೆ ಕಟ್ಟುವಲ್ಲಿ ಬ್ಯಾಂಕರನಿಗೆ ನೆರವು ನೀಡಲು ಕೈಗಾರಿಕಾ ಪರಿಕಲ್ಪನೆಯತ್ತ ಬ್ಯಾಂಕರರ ಒಲವು ಹೆಚ್ಚು ತ್ತಿರುವಂತೆ ತೋರುತ್ತದೆ. ಬ್ಯಾಂಕಿನವರು ವ್ಯವಹಾರ ನಡೆಸುವ ರೀತಿಯಲ್ಲಿ ನಿಸ್ಸಂದೇಹವಾಗಿ ಇದು ಮತ್ತೊಂದು ಬದಲಾವಣೆ. ಆದರೆ ಇದು ಅತಿ ಮೂಲಭೂತ ಬದ ಲಾವಣೆಯೇ ಎಂಬುದು ಸಂದೇಹಾಸ್ಪದ. ಬ್ಯಾಂಕರರು ತಮ್ಮ ಗ್ರಾಹಕರೊಂದಿಗೆ ದೀರ್ಘಕಾಲಿಕ ಸಂಬಂಧವನ್ನು ಬೆಳೆಸಲು ಯಾವಾಗಲೂ ಪ್ರಯತ್ನಿಸುತ್ತಿರುವುದಾಗಿ ಹಿಂದಿ ನಿಂದ ವಾದಿಸುತ್ತಾ ಬಂದಿದ್ದಾರೆ. ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲದ ಮೂಲಕ ಈ ಬಾಂಧವ್ಯ ಈಗ ಬೆಸುಗೆಗೊಂಡಿದೆ. ಆದ್ದರಿಂದ ದೀರ್ಘಾವಧಿಯ ಉದ್ಯಮ ದಲ್ಲಿ ಬ್ಯಾಂಕು ಪಾಲ್ಗೊಳ್ಳುವುದರ ಪರಿಶೀಲನೆಯ ಸಾಧನ ವಾಗಿ, ಅದರ ಭವಿಷ್ಯದ ಯೋಜನೆಗಳು ಮತ್ತು ಅದರ ವ್ಯವಸ್ಥಾಪನ ಮಟ್ಟಗಳನ್ನು ಪರಿಗಣಿಸುವುದು ಇನ್ನಷ್ಟು ಹೆಚ್ಚು ಮುಖ್ಯವಾಗಿದೆ. ಅಂದರೆ ಅಥಾವೆ ಪತ್ರಗಳದು ಕಡಿಮೆ ಪ್ರಾಮುಖ್ಯ ಎಂದು ಸೂಚಿಸಿದಂತಲ್ಲ. ಮರುಪಾವತಿ ಯೋಜನೆಯನ್ನು ಪೂರೈಸುವ ಸಾಮರ್ಥ್ಯದ ಕುರುಹಾಗಿ ಇವನ್ನು ಬಳಸಬಹುದು. ಒಟ್ಟಾರೆ ಹೇಳುವುದಾದರೆ ಇತರೆ ಸಾಕ್ಷಿಗಳನ್ನು ಎಷ್ಟು ಸಾಧ್ಯವಾದರೆ ಅಷ್ಟು ಸಂಗ್ರಹಿಸುವುದು ಅಷ್ಟೇ ಮುಖ್ಯ. ಭವಿಷ್ಯದಲ್ಲಿ ಅಪರಿಚಿತ ಮೂಲಗಳಿಂದ ಅದು ಬರಬಹುದು.

## ಮೂಲ ಲೇಖಕರ ಟಿಪ್ಪಣಿ

ಮಧ್ಯಮ ಹಾಗೂ ದೀರ್ಘಾವಧಿ ಸಾಲ ಮೌಲ್ಯ ನಿರ್ಧಾರಣೆಯಲ್ಲಿ ಕೈಗಾರಿಕಾ ಪರಿಣತರ ಬಳಕೆಯ ಬಗ್ಗೆ ನನ್ನ ಲೇಖನವನ್ನು ಅನುವಾದಿಸಿ ಪುನರ್ಮುದ್ರಿಸುವುದಕ್ಕೆ ನನ್ನ ಆಕ್ಷೇಪಣೆ ಖಂಡಿತ ಇಲ್ಲ. ನೀವು ಈ ವಿಷಯವನ್ನು ಶ್ರೀ ರಾಜ ಗೋಪಾಲರಿಗೆ ತಿಳಿಸುವಾಗ, ಕೈಗಾರಿಕೆಯಲ್ಲಿ ಉನ್ನತ ತಂತ್ರಜ್ಞಾನದ ಅಳವಡಿಕೆಯನ್ನು ಹೆಚ್ಚಿಸಲು ಬ್ರಿಟನ್ನಿನ ಸರಕಾರ ಕೈಗೊಳ್ಳುತ್ತಿರುವ ಕ್ರಮಗಳಿಂದಾಗಿ ಈ ವಿಷಯ ಇಂದು ಬಹಳ ಸಾಮಯಿಕವಾಗಿ ಬಿಟ್ಟಿದೆ ಎಂಬ ವಿಷಯವನ್ನೂ ತಿಳಿಸ ಬಹುದು. ನಿಜಕ್ಕೂ ತಂತ್ರಜ್ಞಾನ ಅಭಿವೃದ್ಧಿಗೊಳ್ಳುತ್ತಿರುವ ವೇಗವನ್ನು ಗಮನಿಸಿದರೆ ಬ್ಯಾಂಕಿನ ಸ್ವಂತ ವಿದ್ಯುನ್ಮಾನ ತಂತ್ರಜ್ಞರೂ ಆ ವೇಗದಲ್ಲಿ ಧಾವಿಸುವುದು ಅಸಾಧ್ಯ (ಯಂತ್ರಮಾನವಜ್ಞಾನ ಹಾಗೂ ಲೇಸರ್ ಉಪಯೋಗದಂತಹ ಕ್ಷೇತ್ರ ಗಳಲ್ಲಿ). ಆದ್ದರಿಂದ ಬ್ಯಾಂಕುಗಳು ಉನ್ನತ ತಂತ್ರಜ್ಞಾನಯುಕ್ತ ಉತ್ಪನ್ನಗಳು ಮತ್ತು ಅವುಗಳಿಗೆ ಸಿಗಬಹುದಾದ ಮಾರು ಕಟ್ಟೆಗಳ ಬಗ್ಗೆ ಹೊರಗಣ ಜನರಿಂದ ಮಾರ್ಗದರ್ಶನ ಪಡೆಯಬೇಕಾದುದು ಅತ್ಯಾವಶ್ಯಕವಾಗಿದೆ. ಇಂಥ ನೆರವಿನ ಕೆಲ ಭಾಗ ಈಗ ಕೈಗಾರಿಕಾ ಇಲಾಖೆಯ ತಾಂತ್ರಿಕ ವಿಚಾರಣಾ ಯೋಜನೆಯಲ್ಲಿ ಲಭ್ಯವಿದೆ. ಈ ಯೋಜನೆಯನ್ನು ಜಾರಿಗೊಳಿಸುತ್ತಿರು ವವರು ಮೆಲ್ಬನ್ ಮೋಬ್ರೇಯಲ್ಲಿರುವ ಪ್ರೊಡಕ್ಷನ್ ಅಂಡ್ ಇಂಜಿನೀರಿಂಗ್ ರಿಸರ್ಚ್ ಅಸೋಸಿಯೇಷನ್‌ನವರು. ಈ ಯೋಜನೆ ಮುಖ್ಯವಾಗಿ ತಯಾರಿಕಾ ಹಂತಗಳನ್ನು (ಮೈಕ್ರೋ ಪ್ರೊಸೆಸರ್‌ಗಳನ್ನು ಕೆಲವೊಮ್ಮೆ ಉಪಯೋಗಿಸಿ) ಅಭಿವೃದ್ಧಿ ಪಡಿಸುವುದರತ್ತ ಗಮನವಿರಿಸಿದೆಯೇ ಹೊರತು, ಉನ್ನತ ತಂತ್ರಜ್ಞಾನವನ್ನೂ ಅಳವಡಿಸಿರುವ ಉತ್ಪನ್ನಗಳ ಮೌಲ್ಯ ನಿರ್ಧಾರಣೆಯಲ್ಲಿ ಅಲ್ಲ. ಉತ್ಪನ್ನವೊಂದು ಅದರೊಂದಿಗೆ ಪೈಪೋಟಿ ನಡೆಸುತ್ತಿರುವ ಇತರ ಉತ್ಪನ್ನಗಳಿಗಿಂತ ಯಾವಯಾವ ಗುಣಾಂಶಗಳನ್ನು ಹೆಚ್ಚಾಗಿ ಹೊಂದಿದೆ ಎಂಬುದನ್ನು ಪರಿಶೋಧಿಸಿ ಉತ್ಪನ್ನಗಳ ಬಗ್ಗೆ ತಿಳಿದುಕೊಳ್ಳಲು ಬ್ಯಾಂಕುಗಳು ತಮ್ಮ ಕೈಲಾದ ಸಾಧನಗಳನ್ನು ಬಳಸಿಕೊಳ್ಳಬೇಕಾದ ಪರಿಸ್ಥಿತಿಯೇ ಹೆಚ್ಚು. ಬ್ಯಾಂಕುಗಳು ಹೆಚ್ಚುಹೆಚ್ಚಾಗಿ, ಹೆಚ್ಚು ಪ್ರಮಾಣ ದಲ್ಲಿ ಸಾಹಸೀ ಬಂಡವಾಳ ಕ್ಷೇತ್ರವನ್ನು ಪ್ರವೇಶಿಸುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಇದು ನಿಜಕ್ಕೂ ಒಂದು ಸಮಸ್ಯೆಯಾಗು ತ್ತಿದೆ. ತಂತ್ರಜ್ಞಾನ ವಿಶ್ವವಿದ್ಯಾನಿಲಯಗಳಲ್ಲಿರುವ ಪರಿಣತರನ್ನು ಉಪಯೋಗಿಸಿಕೊಂಡು ಅವು ಈ ಸಮಸ್ಯೆಯನ್ನು ಬಿಡಿಸಲು ಯತ್ನಿಸುತ್ತಿವೆ. ಅಮೆರಿಕದಲ್ಲಿರುವಂತೆ ತಂತ್ರಜ್ಞಾನ ನವೋನ್ಮೇಷಣ ಕೇಂದ್ರಗಳನ್ನು ನಾವು ಕಾಣುವ ದಿನ ದೂರವಿಲ್ಲ.

ಎಂ. ಜೆ. ರಾಬ್ಬಿ

# ಕಳೆದ ಒಂದು ವರ್ಷದಲ್ಲಿ ಭಾರತೀಯ ಬ್ಯಾಂಕಿಂಗ್: ಒಂದು ಸಮೀಕ್ಷೆ

ಜೂನ್ 1982ಕ್ಕೆ ಕೊನೆಗೊಂಡ ವರ್ಷದಲ್ಲಿ ಭಾರತದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆದ ಮುಖ್ಯ ಬೆಳವಣಿಗೆಗಳನ್ನು ರಿಸರ್ವ್ ಬ್ಯಾಂಕು ಈಚೆಗೆ ಪ್ರಕಟಿಸಿರುವ ವರದಿಯೊಂದರಲ್ಲಿ ಗುರುತಿಸಿದೆ. ಆ ಬೆಳವಣಿಗೆಗಳ ಇಣುಕು ನೋಟವನ್ನು ಇಲ್ಲಿ ಕೊಡಲಾಗಿದೆ.

ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಅಧಿಕ ಉತ್ಪಾದನೆ, ಒಟ್ಟಾರೆ ಉತ್ತಮ ಆರ್ಥಿಕ ಸ್ಥಿತಿಯ ಹಿನ್ನೆಲೆ—ಇದು ಈ ವರ್ಷ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕಂಡುಬಂದ ಪ್ರಗತಿ. ಜೊತೆಗೆ ದ್ರವತ್ವದಲ್ಲಿನ ಹೆಚ್ಚಳದಲ್ಲಿ ಗಮನಾರ್ಹ ಮೆಲುನಡೆ,ಬೆಲೆಯೇರಿಕೆಯ ಗತಿಗೆ ತಡೆ ಒಡ್ಡಿತೆನ್ನಬಹುದು. ಆದರೆ ಅದೇ ಸಮಯಕ್ಕೆ ಹಣಕಾಸು ವಿಸ್ತರಣೆಯ ಮೇಲಿನ ನಿಯಂತ್ರಣವನ್ನು ಸಡಿಲಗೊಳಿಸಲು ಸಾಧ್ಯವಾಗುವಂತೆಯೂ ಇರಲಿಲ್ಲ. ವಾಣಿಜ್ಯ ಬ್ಯಾಂಕುಗಳ ಸಂಪನ್ಮೂಲದಲ್ಲಿನ ತೀವ್ರ ಏರಿಳಿತಗಳಿಂದಾಗಿ ಉದರಿ ನೀತಿಯನ್ನು ಗಮನಾರ್ಹ ಪ್ರಮಾಣದ ಸಡಿಲಿಕೆಯೊಡನೆ ನಿರ್ವಹಿಸಲಾಯಿತು.

ಆದ್ಯತಾ ಕ್ಷೇತ್ರಗಳಲ್ಲಿ ಸಾಲ ಒದಗಣೆಗಾಗಿ ನಿಗದಿಪಡಿಸಿದ್ದ ಗುರಿಗಳನ್ನು ಮುಟ್ಟುವಲ್ಲಿ ವಾಣಿಜ್ಯ ಬ್ಯಾಂಕುಗಳು ಈ ವರ್ಷದಲ್ಲಿ ಒಳ್ಳೆಯ ಪ್ರಗತಿ ಸಾಧಿಸಿದುವು. ಹೊಸ ಶಾಖಾ ಪರವಾನಗಿ ನೀತಿ ಗ್ರಾಮೀಣ ವಿಸ್ತರಣೆಯ ಕಡೆಗೆ ಮತ್ತೊಮ್ಮೆ ಒತ್ತು ನೀಡಿತು. ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಬಾರ್ಡ್) ಮತ್ತು ರಫ್ತಾಮದು (ಎಕ್ಸಿಮ್) ಬ್ಯಾಂಕಿನ ಸ್ಥಾಪನೆ ಇವು ಬ್ಯಾಂಕಿಂಗ್ ಕ್ಷೇತ್ರದ ಸಾಂಸ್ಥಿಕ ಸಂರಚನೆಯನ್ನು ವಿಸ್ತರಿಸುವಲ್ಲಿ ಈ ವರ್ಷದ ಪ್ರಮುಖ ಬೆಳವಣಿಗೆ.

ವಾಣಿಜ್ಯ ಬ್ಯಾಂಕಿಂಗ್‌ನಲ್ಲಿ ಈ ವರ್ಷ ಕೊಂಚ ಕಳವಳ ಉಂಟುಮಾಡಿದ ಅಂಶವೆಂದರೆ ಠೇವಣಿಗಳ ಏರಿಕೆಯಲ್ಲಿ ಉಂಟಾದ ನಿಧಾನ ಪ್ರವೃತ್ತಿ. 1981ರ ಜುಲೈ–ಡಿಸೆಂಬರ್ ಅವಧಿಯಲ್ಲಿ ಠೇವಣಿಗಳ ಏರಿಕೆ ದರ ಸೇ 8.1ರಷ್ಟಿತ್ತು. ಹಿಂದಿನ ವರ್ಷದಲ್ಲಿ ಇದೇ ಅವಧಿಯ ಠೇವಣಿ ಏರಿಕೆ ದರವಾದ ಸೇ 10.6ಕ್ಕೆ ಹೋಲಿಸಿದರೆ ಇದು ಕಡಿಮೆಯೇ. 1982ರ ಮೊದಲ ಎಂಟು ವಾರಗಳಲ್ಲಿ ಠೇವಣಿಗಳು ರೂ. 650 ಕೋಟಿಯಷ್ಟು ತೀವ್ರ ಇಳಿತವನ್ನು ತೋರಿದುವು.

ಅನಂತರ ಠೇವಣಿ ಇಳಿಕೆಯನ್ನು ತಡೆಗಟ್ಟಲಾಯಿತಾದರೂ, ಸ್ಪಷ್ಟವಾದ ಏರಿಕೆಯ ಪ್ರವೃತ್ತಿ ಕಂಡು ಬರಲಿಲ್ಲ. ಠೇವಣಿಗಳಲ್ಲಿ ಏರಿಳಿಯುವ ಚೆಲ್ಲಾಟದ ಪ್ರವೃತ್ತಿ ಕಂಡುಬಂತು. ಜೂನ್ ತಿಂಗಳ ಕಡೆಯ ವಾರದಲ್ಲಿ ಠೇವಣಿಗಳು ರೂ. 1,100 ಕೋಟಿಯ ತೀವ್ರ ಏರಿಕೆಯನ್ನು ತೋರಿದುವು. ಆದರೆ ಆಹಾರೇತರ ಉದರಿಯಲ್ಲಿದ್ದ ಚಂಚಲ ಪ್ರವೃತ್ತಿ ಗಮನಾರ್ಹ. 1982ರ ಏಪ್ರಿಲ್-ಜೂನ್ ಅವಧಿಯಲ್ಲಿ ಅದು ಇಳಿತವನ್ನು ತೋರಿದರೆ ವರ್ಷದ ಮೊದಲರ್ಧದಲ್ಲಿ ಅದು ಅಳತೆ ಮೀರಿದ ಹೆಚ್ಚಿನ ಏರಿಕೆಯನ್ನು ತೋರಿತ್ತು. ಪರಿಸ್ಥಿತಿಯು ಹೆಚ್ಚಿನ ದ್ರವತ್ವದ ವಿಸ್ತರಣೆಗೆ ಎಡೆಕೊಡುವಂತಿತ್ತು. ಆದರೆ ಹಿಂಜರಿತದ ಪ್ರವೃತ್ತಿ ತಲೆದೋರದಂತೆ ಮಾಡಲು ಬ್ಯಾಂಕ್ ಉದರಿಯ ಹರಿವಿನಲ್ಲಿ ಸ್ವಲ್ಪ ಮಟ್ಟಿನ ಸಡಿಲ ನೀತಿಯ ಆವಶ್ಯಕತೆಯಿತ್ತು.

ಅಭಿವೃದ್ಧಿಶೀಲ ಅರ್ಥವ್ಯವಸ್ಥೆಗೆ ಅಗತ್ಯವೆನಿಸುವ ಹಣಕಾಸು ಸಂರಚನೆಯ ವಿಸ್ತರಣೆ ಬ್ಯಾಂಕಿಂಗ್ ಕಾರ್ಯವಿಧಾನಗಳ ವಿಶಿಷ್ಟೀಕರಣದ ಸೂಚಿಯಾಗಿದೆ. ನಿಕಟ ಭವಿಷ್ಯದಲ್ಲಿ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಸಮಾಜದ ಉಳಿತಾಯದ ಪ್ರಧಾನ ಸಂಗ್ರಾಹಕನಾಗಿ ಈ ವ್ಯವಸ್ಥೆಗೆ ಗಂಭೀರ ಸವಾಲು ಎದುರಾಗಿದೆ. ಠೇವಣಿ ಸಂಗ್ರಹಣೆಯ ಪ್ರಗತಿಯಲ್ಲಿನ ಮೆಲುನಡೆಗೆ ಮುಖ್ಯ ಕಾರಣವೆಂದರೆ ಸರಕಾರಿ ಹಾಗೂ ಖಾಸಗಿ ಈ ಎರಡೂ ವಲಯಗಳು ನೇರ ಸಂಗ್ರಹಣೆಯಲ್ಲಿ ಹೆಚ್ಚು ಹೆಚ್ಚಾಗಿ ತೊಡಗಿ ಆ ಕಾರಣದಿಂದ ಉಳಿತಾಯ ಮಾಧ್ಯಮಗಳ ಹರಹು ವಿಸ್ತಾರಗೊಂಡದ್ದು.

ಸಮಾಜದ ವಿವಿಧ ಸ್ತರಗಳನ್ನು ಆಕರ್ಷಿಸಬಲ್ಲ ವಿವಿಧ ಬಗೆಯ ಉಳಿತಾಯ ಮಾಧ್ಯಮಗಳಿರುವುದು ಅಪೇಕ್ಷಣೀಯವೇ. ಏಕೆಂದರೆ, ಇದರಿಂದ ದೇಶದ ಆರ್ಥಿಕ ಆಸ್ತಿಗಳಲ್ಲಿ ಉಳಿತಾಯದ ಮೊತ್ತದ ಒಟ್ಟಾರೆ ಪಾಲು ಏರುತ್ತದೆ. ಉಳಿತಾಯ ಸಂಗ್ರಹಣೆಯ ಕೆಲಸದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಗೆ ಕೆಲವು ವಿಶಿಷ್ಟ ಅನುಕೂಲಗಳಿವೆ. ಉಳಿತಾಯಗಾರನೊಂದಿಗೆ ಸುಲಭ ಸಂಪರ್ಕ ಹಾಗೂ ವೈಯಕ್ತಿಕ ನಿಕಟಸೇವೆ ಈ ಎರಡೂ ಅಂಶಗಳು ಬ್ಯಾಂಕಿಂಗ್ ವ್ಯವಸ್ಥೆಯ ವಿಸ್ತೃತವಾದ ಶಾಖಾಜಾಲದಿಂದ ಸಾಧಿತವಾಗುತ್ತವೆ. ವಾಣಿಜ್ಯ ಬ್ಯಾಂಕುಗಳು ಒದಗಿಸುವ ವಿವಿಧ ಬಗೆಯ ಸೇವೆಗಳಲ್ಲಿ

ಆಯ್ಕೆಯ ಅವಕಾಶವೂ ಉಳಿತಾಯಗಾರನಿಗೆ ಇದೆ. ಬ್ಯಾಂಕುಗಳು ಈ ಅನುಕೂಲಗಳನ್ನು ಬಳಸಿಕೊಂಡು ತಮ್ಮ ಸಂಪನ್ಮೂಲಗಳನ್ನು ಗರಿಷ್ಠಗೊಳಿಸಿಕೊಳ್ಳುವುದು ಎಂದಿಗಿಂತ ಇಂದು ಹೆಚ್ಚು ಮುಖ್ಯ.

ಭಾರತದಲ್ಲಿಯ ಭವಿಷ್ಯದ ಬ್ಯಾಂಕಿಂಗ್ ವಿಸ್ತರಣೆ ಆಗಬೇಕಾದ್ದು ಹೆಚ್ಚು ದುರ್ಗಮ ಹಾಗೂ ಕಷ್ಟಭರಿತವಾದ ಗ್ರಾಮೀಣ ಪ್ರದೇಶಗಳಲ್ಲಿ ಎಂಬುದು ಖಂಡಿತ. ಬ್ಯಾಂಕುಗಳ ಅಸ್ತಿತ್ವವನ್ನು ಅಂಥಲ್ಲಿ ಭದ್ರಗೊಳಿಸಬೇಕಾಗಿದೆ. ಈ ವಿಸ್ತರಣೆಯಿಂದಾಗಿ ಸಂಪರ್ಕ ಮತ್ತು ನಿಯಂತ್ರಣದಲ್ಲಿ ಅಡಚಣೆಗಳು ಉದ್ಭವಿಸುತ್ತವೆ. ಕಳೆದ ವರ್ಷ ಬ್ಯಾಂಕ್ ಉದರಿಯಲ್ಲಿ ಆದ ಬೆಳೆವಣಿಗೆಗಳು ಈ ವ್ಯವಸ್ಥೆಯ ಮೂಲಕ ನೀತಿನಿರ್ಧಾರಣದ ವಿಿಡಿತಗಳನ್ನು ಸಕಾಲದಲ್ಲಿ ಹರಡುವುದರಲ್ಲಾಗಲಿ ನೀತಿನಿರ್ಧಾರಣಕ್ಕೆ ಬಹುಮುಖ್ಯವಾದ ಬೆಳೆವಣಿಗೆಗಳ ಸ್ಥಿತಿಮಾಹಿತಿಯನ್ನು ಪಡೆದುಕೊಳ್ಳುವಲ್ಲಿಯಾಗಲಿ ಇರುವ ಕೊರತೆಗಳನ್ನು ಮತ್ತೊಮ್ಮೆ ಎತ್ತಿ ತೋರಿಸಿವೆ. ಆದ್ದರಿಂದ ಮಾಹಿತಿ ಪೂರೈಕೆ ವ್ಯವಸ್ಥೆಯಲ್ಲಿನ ಸುಧಾರಣೆ ಪ್ರತಿ ಬ್ಯಾಂಕಿಗೂ ಇಡೀ ವ್ಯವಸ್ಥೆಗೂ ಒಂದು ಮುಖ್ಯ ಹಾಗೂ ತುರ್ತು ಆವಶ್ಯಕತೆಯಾಗಿದೆ.

### ವಾಣಿಜ್ಯ ಬ್ಯಾಂಕಿನ ಬೆಳೆವಣಿಗೆ

| | ಜೂನ್ ಅಂತ್ಯಕ್ಕೆ | |
|---|---|---|
| | 1981 | 1982 |
| ಶಾಖೆಗಳ ಸಂಖ್ಯೆ | 35,707 | 39,180 |
| ಗ್ರಾಮೀಣ | 17,650 | 20,398 |
| ಅರೆಪೌರ | 8,426 | 8,763 |
| ಪೌರ | 5,126 | 5,360 |
| ಮಹಾನಗರ/ಬಂದರುಗಳು | 4,505 | 4,659 |
| ಪ್ರತಿ ಬ್ಯಾಂಕ್ ಶಾಖೆಗೆ ಜನಸಂಖ್ಯೆ | 19,000 | 17,500 |
| | (ಕೋಟಿ ರೂ) | |
| ಒಟ್ಟು ಠೇವಣಿಗಳು | 40,549 | 45,831 |
| ಒಟ್ಟು ಬ್ಯಾಂಕ್ ಉದರಿ | 26,553 | 30,104 |
| ವಿನಿಯೋಜನೆಗಳು | 14,222 | 16,883 |
| ರಿಸರ್ವ್ ಬ್ಯಾಂಕಿನೊಂದಿಗಿರುವ ನಗದು ಹಾಗೂ ಶಿಲ್ಕುಗಳು | 5,501 | 5,728 |
| ರಿಸರ್ವ್ ಬ್ಯಾಂಕ್‌ನಿಂದ ಪಡೆದ ಸಾಲಗಳು | 564 | 572 |

### ಉದರಿ ಪೂರೈಕೆ*

| | (ಕೋಟಿ ರೂ.ಗಳಲ್ಲಿ) | |
|---|---|---|
| | ಮಾರ್ಚ 1981 | ಮಾರ್ಚ 1982 |
| **ಒಟ್ಟಾರೆ ಬ್ಯಾಂಕ್ ಉದರಿ** | 24,804 | 29,159 |
| ಆಹಾರ ಧಾನ್ಯ ಸಂಗ್ರಹಣೆ | 1,759 | 2,127 |
| ಆಹಾರೇತರ | 23,045 | 27,032 |
| ಇದರಲ್ಲಿ ರಫ್ತು ಉದರಿ | 1,640 | 1,799 |
| **ಆಹಾರೇತರ ಉದರಿ** | | |
| ಆದ್ಯತಾ ಕ್ಷೇತ್ರಗಳು | 8,504 | 10,667 |
| ಕೃಷಿ | 3,584 | 4.593 |
| ಸಣ್ಣ ಕೈಗಾರಿಕೆಗಳು | 3,229 | 3,907 |
| ಇತರೆ ಆದ್ಯತಾ ಕ್ಷೇತ್ರಗಳು | 1,691 | 2,167 |
| ಕೈಗಾರಿಕೆ (ಮಧ್ಯಮ ಹಾಗೂ ದೊಡ್ಡ ಪ್ರಮಾಣ) | 9,960 | 11,167 |
| ಸಗಟು ವ್ಯಾಪಾರ | 1,994 | 2,219 |
| ಇತರೆ ಕ್ಷೇತ್ರಗಳು | 2,587 | 2,979 |

* ಎಲ್ಲ ಬ್ಯಾಂಕುಗಳ ಒಟ್ಟಾರೆ ಬ್ಯಾಂಕ್ ಉದರಿಗಳ ಸೇ. 96ರಷ್ಟಾಗುವ 50 ಮುಖ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ

[ಆಧಾರ: ರಿಸರ್ವ್ ಬ್ಯಾಂಕ್ ನ್ಯೂಸ್ ಲೆಟರ್, ಸಂಪುಟ ೮, ಸಂಚಿಕೆ 22, ನವೆಂಬರ್ 30, 1982]

—ಸಾಅನಂ

# ಸುದ್ದಿಸಾರ

**ಸಾ. ಅ. ಮಂಜುನಾಥ**

### ಉಕ್ಕು ಮರು ಎರಕ ಗಿರಣಿಗಳಿಗೆ ಹಣಕಾಸು ನೆರವು

ಉಕ್ಕಿನ ತುಂಡುಗಳು ಮತ್ತು ಮರು ಎರಕಗೊಳ್ಳಬಲ್ಲ ಚೂರುಪಾರುಗಳು—ಇವು ಉಕ್ಕು ಮರು ಎರಕ ಗಿರಣಿಗಳು ಬಳಸುವ ಕಚ್ಚಾಸಾಮಗ್ರಿಗಳು. ಇವುಗಳ ಕೊರತೆಯಿಂದಾಗಿ ದೇಶದ ಮರು ಎರಕ ಗಿರಣಿಗಳ ಕಾರ್ಯಸಾಮರ್ಥ್ಯವನ್ನು ಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ಆದುದರಿಂದ ಮರು ಎರಕ ಗಿರಣಿಗಳ ಕಾರ್ಯಸಾಮರ್ಥ್ಯವನ್ನು ಇನ್ನಷ್ಟು ಹೆಚ್ಚಿಸುವ ಉದ್ದೇಶಕ್ಕೆ ಆರ್ಥಿಕ ನೆರವು ನೀಡುವುದು ಅಪೇಕ್ಷಣೀಯವಲ್ಲ. ಆದರಿಂದಾಗಿ ಇಂತಹ ಸಾಲಗಳ ಬಗ್ಗೆ ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕಿನ ಪುನರ್ವಿತ್ತ ಸಹಾಯ ದೊರೆಯುವುದಿಲ್ಲ.

### ಗ್ರಾಹಕ ದೇವೋ ಭವ

ವಾಣಿಜ್ಯ ಬ್ಯಾಂಕುಗಳಲ್ಲಿ ಗ್ರಾಹಕರಿಗೆ ನೀಡಲಾಗುತ್ತಿರುವ ಸೇವೆಗಳನ್ನು ಉತ್ತಮಪಡಿಸುವ ದೃಷ್ಟಿಯಿಂದ ಅವುಗಳಿಗೆ ಕೆಲವು ಸೂಚನೆಗಳನ್ನು ರಿಸರ್ವ್ ಬ್ಯಾಂಕು ನೀಡಿದೆ. ಸಾಧ್ಯವಿದ್ದೆಡೆಗಳಲ್ಲೆಲ್ಲಾ ಟೆಲ್ಲರ್ ಪದ್ಧತಿಯನ್ನು ಜಾರಿಗೊಳಿಸುವುದು, ಬ್ಯಾಂಕ್ ಡ್ರಾಫ್ಟ್‌ಗಳ ನೀಡಿಕೆ ಮತ್ತು ಪಾವತಿಯನ್ನು ಟೆಲ್ಲರ್ ಪದ್ಧತಿಯ ವ್ಯಾಪ್ತಿಗೆ ತರುವುದು ಮತ್ತು ಮೊದಲೇ ನಿಗದಿಪಡಿಸಿದ ಮೊತ್ತಗಳ ಬ್ಯಾಂಕ್ ಡ್ರಾಫ್ಟ್‌ಗಳನ್ನು ಜಾರಿಗೆ ತಂದು ಗ್ರಾಹಕರು ಕಾಯಬೇಕಾದ ಅವಧಿಯನ್ನು ಕಡಿಮೆಗೊಳಿಸುವುದು, ಗ್ರಾಮೀಣ ಶಾಖೆಗಳಲ್ಲಿ ರೂ. 1,000ದ ವರೆಗೆ, ಅರೆ-ಪಟ್ಟಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ರೂ. 2,000 ವರೆಗೆ ಮತ್ತು ಮಹಾನಗರ ಶಾಖೆಗಳಲ್ಲಿ ರೂ. 5,000 ಗಳ ವರೆಗೆ ಯಾವುದೇ ಬ್ಯಾಂಕು ನೀಡಿದ ಪ್ರವಾಸಿಗಳ ಚೆಕ್ಕನ್ನು ಪಾವತಿ ಮಾಡುವುದು, ಪರಸ್ಥಳ ಚೆಕ್ಕುಗಳ ವಸೂಲಾತಿಗಾಗಿ ಹೆಚ್ಚು ಹೆಚ್ಚು ಕೇಂದ್ರಗಳಲ್ಲಿ ಪ್ರಾದೇಶಿಕ ವಸೂಲಾತಿ ಕೇಂದ್ರಗಳನ್ನು ಸ್ಥಾಪಿಸುವುದು, ಖಾತಾ ನಿರ್ವಹಣೆಯಲ್ಲಿ ಯಂತ್ರಗಳ ಬಳಕೆಯ ಪರಿಶೀಲನೆ, ಸಿಬ್ಬಂದಿಗಳ ಬಗ್ಗೆ ಬರುವ ದೂರುಗಳ ತೀವ್ರ ಪರಿಶೀಲನೆ, ಪ್ರಧಾನ ಶಾಖೆಗಳಲ್ಲಿ ಗ್ರಾಹಕ ಸೇವಾ ಸಮಿತಿಗಳ ಸ್ಥಾಪನೆ ಇವು ಅದು ನೀಡಿರುವ ಸೂಚನೆಗಳು.

### ಚಿನ್ನ ಬೆಳ್ಳಿ ಆಭರಣಗಳ ಈಡಿನ ಮೇಲೆ ಸಹಕಾರಿ ಬ್ಯಾಂಕಿನ ಸಾಲಗಳು

ಕೇಂದ್ರ ಸಹಕಾರಿ ಬ್ಯಾಂಕುಗಳು ಚಿನ್ನ ಮತ್ತು ಬೆಳ್ಳಿಯ ಆಭರಣಗಳ ಈಡಿನ ಮೇಲೆ ನೀಡುತ್ತಿದ್ದ ಸಾಲದ ಮಿತಿಯನ್ನು ಪ್ರತಿ ಸಾಲಗಾರನಿಗೆ ರೂ. 2,000ದಿಂದ ರೂ. 3,000 ಕ್ಕೆ ಏರಿಸಲಾಗಿದೆ.

### ಠೇವಣಿ ವಿಮೆ ಯೋಜನೆಯ ರಕ್ಷಣೆ ಹೊಂದಿರುವ ಬ್ಯಾಂಕುಗಳು

ಈಗ ಭಾರತದಲ್ಲಿ ಠೇವಣಿ ವಿಮೆ ಯೋಜನೆಯ ರಕ್ಷಣೆ ಹೊಂದಿರುವ ಬ್ಯಾಂಕುಗಳ ಸಂಖ್ಯೆ 1,671. ಇವುಗಳಲ್ಲಿ 82 ವಾಣಿಜ್ಯ ಬ್ಯಾಂಕುಗಳು, 121 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಮತ್ತು 1,468 ಅರ್ಹ ಸಹಕಾರಿ ಬ್ಯಾಂಕುಗಳು.

ಈ ಅರ್ಹ ಸಹಕಾರಿ ಬ್ಯಾಂಕುಗಳ ರಾಜ್ಯವಾರು ವಿವರ ಕೆಳಕಂಡಂತಿದೆ:

| ರಾಜ್ಯ | ಬ್ಯಾಂಕುಗಳ ಸಂಖ್ಯೆ |
|---|---|
| ಕರ್ನಾಟಕ | 222 |
| ಆಂಧ್ರ ಪ್ರದೇಶ | 79 |
| ಉತ್ತರ ಪ್ರದೇಶ | 71 |
| ಒರಿಸ್ಸಾ | 28 |
| ಕೇರಳ | 63 |
| ಗುಜರಾತ್ | 296 |
| ಗೋವಾ, ಡಮನ್ ಮತ್ತು ಡಿಯು | 5 |
| ಜಮ್ಮು ಮತ್ತು ಕಾಶ್ಮೀರ | 5 |
| ತಮಿಳು ನಾಡು | 147 |
| ತ್ರಿಪುರ | 2 |
| ದೆಹಲಿ | 11 |
| ಪಶ್ಚಿಮ ಬಂಗಾಳ | 63 |
| ಪಾಂಡಿಚೆರಿ | 2 |
| ಮಧ್ಯ ಪ್ರದೇಶ | 70 |
| ಮಹಾರಾಷ್ಟ್ರ | 358 |
| ರಾಜಸ್ಥಾನ | 40 |
| ಹಿಮಾಚಲ ಪ್ರದೇಶ | 6 |
| ಒಟ್ಟು | 1,468 |

### ತೀರುವೆ ಮನೆಗೆ ಬಂತು ಗಣಕಯಂತ್ರ

ಮುಂಬಯಿಯಲ್ಲಿ ಬ್ಯಾಂಕರರ ತೀರುವೆ ಮನೆಗೆ ನವೆಂಬರ್ 12ರಂದು ಗಣಕಯಂತ್ರವೊಂದು ಬಂದು ನೆಲಸಿತು. ಈ 'ನವ ವಧು'ವನ್ನು ಮನೆಗೆ ಒಪ್ಪಿಸಿಕೊಟ್ಟವರು ರಿಸರ್ವ್ ಬ್ಯಾಂಕಿನ ಗವರ್ನರ್ ಡಾ. ಮನಮೋಹನ ಸಿಂಗ್. ಈಗ ಈ ತೀರುವೆ ಮನೆಯ ವ್ಯವಹಾರ ಗಣಕಯಂತ್ರದ (ಕಂಪ್ಯೂಟರ್) ಸಹಾಯದಿಂದ ನಡೆಯುತ್ತಿದೆ.

ಈ ನವ ವಧು ಕೆಲಸ ಮಾಡುವ ರೀತಿ ಇಂತಿದೆ—ಈ ವ್ಯವಸ್ಥೆ ನಮ್ಮ ದೇಶದಲ್ಲೇ ತಯಾರಿಸಲಾದ 'ಸಮರ್ಪಿತ' ಕಿರುಗಣಕ ವ್ಯವಸ್ಥೆಯೊಂದನ್ನು ಆಧರಿಸಿದೆ. ಇದರಲ್ಲಿ ಹತ್ತು ಮಾಹಿತಿ ಪೂರೈಕೆ ಕೇಂದ್ರಗಳೂ ಎರಡು ಸಂಸ್ಕರಣ ಘಟಕಗಳೂ ಇವೆ. ಸದಸ್ಯ ಬ್ಯಾಂಕುಗಳ ಪ್ರತಿನಿಧಿಗಳು ಹಿಂದೆ ಮಾಡುತ್ತಿದ್ದಂತೆ ಎಲ್ಲರೂ ಒಂದೇ ವೇಳೆಗೆ ಸೇರುವ ಬದಲು ಬೆಳಗ್ಗೆ 9 ರಿಂದ 6ರ ವರೆಗಿನ ಅವಧಿಯಲ್ಲಿ ಮೂರು ಬಾರಿ ತಮತಮಗೆ ನಿಗದಿಪಡಿಸಲಾದ ಕಾಲಾವಧಿಯಲ್ಲಿ ತೀರುವೆ ಮನೆಗೆ ಬರುತ್ತಾರೆ. ಬಂದವರು ಇತರ ಬ್ಯಾಂಕುಗಳಿಗೆ ನಿಗದಿಪಡಿಸಲಾದ ಸ್ವೀಕರಣ ಪೆಟ್ಟಿಗೆಗಳಲ್ಲಿ ಆಯಾ ಬ್ಯಾಂಕಿನ ಚೆಕ್ಕುಗಳನ್ನು ಇರಿಸುತ್ತಾರೆ. ತಾವು ಬ್ಯಾಂಕುವಾರು ಸಲ್ಲಿಸಿದ ಚೆಕ್ಕುಗಳ ವಿವರಗಳನ್ನುಳ್ಳ ತಖ್ತೆಯೊಂದನ್ನು ತೀರುವೆ ಮನೆಯ ಅಧಿಕಾರಿಗೆ ನೀಡುತ್ತಾರೆ. ಈ ಅಧಿಕಾರಿ ಈ ತಖ್ತೆಯನ್ನು ಯಂತ್ರದ ಮಾಹಿತಿ ಪೂರೈಕೆಯ ಕೇಂದ್ರಗಳಲ್ಲಿ ದಾಖಲಿಸುವ ಸಲುವಾಗಿ ನೀಡುತ್ತಾನೆ. ವಿವಿಧ ಬ್ಯಾಂಕುಗಳಿಂದ ಸ್ವೀಕರಿಸಲಾದ ಮಾಹಿತಿಯನ್ನು ಅನಂತರ ಪದರಗಳಿರುವ ವರ್ತುಲ ಫಲಕಗಳಲ್ಲಿ ಶೇಖರಿಸಲಾಗುತ್ತದೆ. ಗಣಕಯಂತ್ರಕ್ಕೆ ಪೂರೈಸಲಾದ ಮಾಹಿತಿಯ ಕರಡು ಪ್ರತಿಯೊಂದನ್ನು ಸದಸ್ಯ ಬ್ಯಾಂಕಿನ ಪ್ರತಿನಿಧಿಗೆ ನೀಡಲಾಗುತ್ತದೆ. ಯಂತ್ರಕ್ಕೆ ಉಣಿಸಲಾದ ಮಾಹಿತಿಯ ವಿವರಗಳು ಸರಿಯಾಗಿವೆಯೆಂದು ಖಚಿತಪಡಿಸಿಕೊಂಡನಂತರ ಪ್ರತಿನಿಧಿ ತೀರುವೆ ಮನೆಯಿಂದ ತೆರಳುತ್ತಾನೆ. ಹೋಗುವಾಗ ತನ್ನ ಬ್ಯಾಂಕಿನ ಸ್ವೀಕರಣ ಪೆಟ್ಟಿಗೆಯಲ್ಲಿ ಇತರ ಬ್ಯಾಂಕುಗಳು ಇರಿಸಿರುವ ಚೆಕ್ಕುಗಳನ್ನು ಸಂಗ್ರಹಿಸಿ ಒಯ್ಯುತ್ತಾನೆ. ಮುಂಚೆಯೇ ನಿಗದಿಪಡಿಸಲಾದ ಇತ್ಯರ್ಥ ವೇಳೆಗಳಲ್ಲಿ ಅಂದರೆ ಮಧ್ಯಾಹ್ನ 12 ಗಂಟೆ, 3 ಗಂಟೆ ಮತ್ತು ಸಂಜೆ 6 ಗಂಟೆಗಳಲ್ಲಿ ಪದರಗಳಿರುವ ವರ್ತುಲ ಫಲಕಗಳಲ್ಲಿ ಶೇಖರಿಸಲಾದ ಮಾಹಿತಿಯನ್ನು ಸಂಸ್ಕರಣೆಗೊಳಪಡಿಸಿ ಬ್ಯಾಂಕುಗಳ ನಡುವಿನ ಹೊಂದಾಣಿಕೆ ಮೊತ್ತಗಳನ್ನು ತಿಳಿಯಲಾಗುತ್ತದೆ. ಪ್ರತಿದಿನ ಮಧ್ಯಾಹ್ನ ಹನ್ನೆರಡೂವರೆ, ಮೂರೂವರೆ ಹಾಗೂ ಸಂಜೆ ಆರೂವರೆ ಗಂಟೆಗಳ ವೇಳೆಗೆ ಪ್ರತಿ ಸದಸ್ಯ ಬ್ಯಾಂಕಿಗೂ ಹೊಂದಾಣಿಕೆ ಮೊತ್ತ ತಖ್ತೆಯ ಮುದ್ರಿತ ಪ್ರತಿಗಳು ಲಭ್ಯವಾಗುತ್ತವೆ.

### ಪಟ್ಟಣ ಸಹಕಾರಿ ಬ್ಯಾಂಕುಗಳಲ್ಲಿ ಮುಕ್ತ ಸದಸ್ಯತ್ವ

ದೇಶದ ಯಾವುದೇ ನಿರ್ದಿಷ್ಟ ಜಾತಿ ಅಥವಾ ಕೋಮಿನ ಒಳಿತಿಗಾಗಿ ಕಾರ್ಯ ನಿರ್ವಹಿಸಲು ಯಾವುದೇ ಪಟ್ಟಣ ಸಹಕಾರಿ ಬ್ಯಾಂಕಿಗೂ ಅವಕಾಶ ನೀಡಲಾಗುವುದಿಲ್ಲ. ಈ ವಿಷಯವನ್ನು ರಿಸರ್ವ್ ಬ್ಯಾಂಕು ಸಹಕಾರಿ ಸಂಘಗಳ ನೋಂದಣಿ ಅಧಿಕಾರಿಗಳಿಗೆ ಮತ್ತೊಮ್ಮೆ ಒತ್ತಿ ಹೇಳಿ, ಹೊಸ ಬ್ಯಾಂಕುಗಳ ನೋಂದಣಿ ಮಾಡುವಾಗ ಈ ವಿಷಯದ ಬಗ್ಗೆ ಅವುಗಳ ನಿಯಮಾವಳಿಗಳನ್ನು ನಿರ್ದಿಷ್ಟವಾಗಿ ಪರಿಶೀಲಿಸಬೇಕೆಂದೂ, ಈಗಾಗಲೇ ನೋಂದಾಯಿತವಾದ ಬ್ಯಾಂಕುಗಳ ನಿಯಮಾವಳಿಗಳಲ್ಲಿ ಸದಸ್ಯತ್ವ ಪಡೆಯಲು ಈ ಬಗೆಯ ಅಡೆತಡೆಗಳಿರುವ ಎಡೆಗಳಲ್ಲಿ ಅವನ್ನು ತಿದ್ದುಪಡಿ ಮಾಡಲು ಏರ್ಪಾಡು ಮಾಡಬೇಕೆಂದೂ ತಿಳಿಸಿದೆ. ಪಟ್ಟಣ ಸಹಕಾರಿ ಬ್ಯಾಂಕುಗಳು ತಮ್ಮ ಹೆಸರಿಗೆ ಅನ್ವರ್ಥವಾಗಿ ನಿಜವಾದ ಸಹಕಾರಿ ಸ್ವರೂಪವನ್ನು ಹೊಂದುವಂತೆ ಅದರ ಸದಸ್ಯತ್ವ ವಿಶಾಲ ತಳಹದಿಯ ಆಧಾರವುಳ್ಳದ್ದಾಗಿರಬೇಕೇ ಹೊರತು ಕೆಲವೇ ಜನರ ಖಾಸಗಿ ಸ್ವತ್ತಿನಂತಾಗಬಾರದೆಂದು ಈ ಹಿಂದೊಮ್ಮೆ ಪೌರ ಸಹಕಾರಿ ಬ್ಯಾಂಕುಗಳ ಬಗ್ಗೆ ಏರ್ಪಡಿಸಿದ್ದ ಸಮಿತಿ ತನ್ನ ವರದಿಯಲ್ಲಿ ನಿರೂಪಿಸಿದ್ದುದನ್ನು ಇಲ್ಲಿ ಸ್ಮರಿಸಬಹುದು.

### ಸಣ್ಣ ಸೇವಾ ಘಟಕಗಳಿಗೆ ರಿಯಾಯಿತಿ ಸಾಲ

ಗ್ರಾಮೀಣ ಪ್ರದೇಶಗಳಲ್ಲಿ ಮತ್ತು 1 ಲಕ್ಷ ಅಥವಾ ಅದಕ್ಕೆ ಕಡಿಮೆಯ ಜನಸಂಖ್ಯೆ ಇರುವ ಸ್ಥಳಗಳಲ್ಲಿ ಇರುವ ಲಾಂಡ್ರಿ, ಜೆರಾಕ್ಸ್ ಪ್ರತಿ ತೆಗೆಯುವಿಕೆ, ಗ್ರಾಹಕ ಬಳಕೆ ವಸ್ತುಗಳ ರಿಪೇರಿ ಮತ್ತು ನಿರ್ವಹಣೆ ಈ ಕೆಲಸಗಳನ್ನು ನಿರ್ವಹಿಸುವ ಯಂತ್ರಸ್ಥಾವರಗಳಲ್ಲಿ ರೂ. 2 ಲಕ್ಷಕ್ಕೆ ಹೆಚ್ಚಿಲ್ಲದಂತೆ ವಿನಿಯೋಜನೆ ಹೊಂದಿರುವ ಸಣ್ಣ ಗಾತ್ರದ ಸೇವಾಘಟಕಗಳನ್ನು ಸಣ್ಣಗಾತ್ರದ ಸ್ಥಾಪನೆಗಳೆಂದು ನೊಂದಾಯಿಸಿಕೊಳ್ಳಬಹುದೆಂದು ಕೇಂದ್ರ ಸರಕಾರ ಇತ್ತೀಚೆಗೆ ತೀರ್ಮಾನಿಸಿದೆ. ಇದರಿಂದಾಗಿ ಸಣ್ಣ ಪ್ರಮಾಣದ ಹಾಗೂ ಪೂರಕ ಕೈಗಾರಿಕೆಗಳಿಗೆ ನೀಡಲಾಗುವ ರಿಯಾಯಿತಿಗಳು ಹಾಗೂ ಪ್ರೋತ್ಸಾಹಗಳನ್ನು ಈ ಸಣ್ಣ ಪ್ರಮಾಣದ ಸೇವಾಘಟಕಗಳಿಗೂ ನೀಡಬೇಕೆಂದು ರಿಸರ್ವ್ ಬ್ಯಾಂಕ್ ಇತರ ಬ್ಯಾಂಕುಗಳಿಗೆ ತಿಳಿಸಿದೆ.

### ಹಣಕಾಸು ವ್ಯವಸ್ಥೆಯ ಕಾರ್ಯವಿಧಾನ ಪರಿಶೀಲನೆಗೆ ಸಮಿತಿಯ ರಚನೆ

ದೇಶದ ಹಣಕಾಸು ಪದ್ಧತಿಯ ಕಾರ್ಯವಿಧಾನವನ್ನು ಕೂಲಂಕಷವಾಗಿ ಪರಿಶೀಲಿಸಿ ಆರ್ಥಿಕ ನೀತಿಗಳ ಮೂಲೋದ್ದೇಶಗಳನ್ನು ಈಡೇರಿಸುವ ಸಾಧನವಾಗಿ ಹಣಕಾಸು ಪದ್ಧತಿಯ ಪರಿಣಾಮಕಾರಿ ಪಾತ್ರವನ್ನು ಉತ್ತಮಗೊಳಿಸಲು ಮಾರ್ಗೋಪಾಯಗಳನ್ನು ಸಲಹೆ ಮಾಡುವ ಸಲುವಾಗಿ ದೆಹಲಿ ಅರ್ಥಶಾಸ್ತ್ರ ಶಾಲೆಯ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಪ್ರೊ. ಸುಖಮಯ ಚಕ್ರವರ್ತಿಯವರ ಅಧ್ಯಕ್ಷತೆಯಲ್ಲಿ 5 ಜನ ಸದಸ್ಯರ ಸಮಿತಿಯೊಂದನ್ನು ರಚಿಸಲಾಗಿದೆ. ಸಮಿತಿ ಮುಂದಿನ ವರ್ಷದ ಜೂನ್ ತಿಂಗಳ ಅಂತ್ಯದೊಳಗೆ ವರದಿಯನ್ನು ಸಲ್ಲಿಸುವಂತೆ ಕೋರಲಾಗಿದೆ.

# ಶಿರಸಿಯ ಬ್ಯಾಂಕಿಂಗ್ ಕಮ್ಮಟ

ಬಿ. ಎಸ್. ಚಂದ್ರಶೇಖರ

## ಒಂದು ವರದಿ

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಇದೇ ಏಪ್ರಿಲ್ 1ರಿಂದ 6ರ ವರೆಗೆ ಬ್ಯಾಂಕಿಂಗ್ ವಿಷಯ ಕುರಿತ ಕಾರ್ಯಶಿಬಿರವೊಂದು ಶಿರಸಿಯಲ್ಲಿ ನಡೆಯಿತು. ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಬ್ಯಾಂಕ್, ಬ್ಯಾಂಕ್ ಆಫ್ ಬರೋಡಾ ಹಾಗೂ ಕೆನರಾ ಬ್ಯಾಂಕುಗಳಿಂದ ಬಂದ ಪ್ರತಿನಿಧಿಗಳು ಈ ಕಾರ್ಯ ಶಿಬಿರದಲ್ಲಿ ಭಾಗವಹಿಸಿದರು

1982ರ ಏಪ್ರಿಲ್‌ನಲ್ಲಿ ಮೊದಲನೆಯ ಬಾರಿಗೆ ಮೈಸೂರಿನಲ್ಲಿ ಇಂಥ ಕಾರ್ಯಕ್ರಮ ನಡೆಸಿದ ಸಮನ್ವಯ ಸಮಿತಿ ಇದೀಗ ಬ್ಯಾಂಕಿಂಗ್ ಕಮ್ಮಟಗಳನ್ನು ನಡೆಸುವುದನ್ನು ತನ್ನ ಮುಖ್ಯ ಕಾರ್ಯಕ್ರಮಗಳಲ್ಲಿ ಒಂದನ್ನಾಗಿಸಿಕೊಂಡಿದೆ. ಎರಡನೆಯ ಕಮ್ಮಟ ಅಕ್ಟೋಬರ್ ತಿಂಗಳಲ್ಲಿ ಶಿವನ ಸಮುದ್ರದಲ್ಲಿ ನಡೆದಿತ್ತು.

1 ಬ್ಯಾಂಕಿಂಗ್ ಮತ್ತು ಹಣಕಾಸಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ಕುರಿತು ಕನ್ನಡದಲ್ಲಿ ಪ್ರಬಂಧ ರಚನೆ,

2 ಬ್ಯಾಂಕಿಂಗ್ ನಿಯತಕಾಲಿಕೆಗಳಲ್ಲಿಯ ಪ್ರೌಢಲೇಖನಗಳ ಭಾಷಾಂತರ,

3 ಕನ್ನಡದಲ್ಲಿ ಬ್ಯಾಂಕಿಂಗ್ ಪಾರಿಭಾಷಿಕ ಶಬ್ದಗಳ ಸೃಷ್ಟಿ ಹಾಗೂ ಬಳಕೆ,

4 ಬ್ಯಾಂಕುಗಳಲ್ಲಿ ಬಳಸುವ ನಮೂನೆಗಳು, ಮೊಹರುಗಳು ಮುಂತಾದವುಗಳ ಕನ್ನಡೀಕರಣ

ಇವು ಈ ಕಮ್ಮಟದಲ್ಲಿ ಕೈಗೆತ್ತಿಕೊಂಡ ಕಾರ್ಯಗಳು. ಪ್ರೊ. ಎಚ್ಚೆಸ್ಕೆಯವರ ಸಮರ್ಥ ನಿರ್ದೇಶನದಲ್ಲಿ ಬ್ಯಾಂಕುಗಳಲ್ಲಿ ಕನ್ನಡ ಬಳಸಲು ಮಾರ್ಗದರ್ಶನ ಹಾಗೂ ಸಾಮರ್ಥ್ಯ ಪಡೆದುಕೊಳ್ಳುವ ಪ್ರಯತ್ನ ಈ ಕಮ್ಮಟದಲ್ಲಿ ನಡೆಯಿತು.

### ಉದ್ಘಾಟನೆ

ಕಲಾವಿದರೂ ಸಮಾಜಸೇವಕರೂ ಶಿರಸಿಯ ಶ್ರೀ ಮಾರಿಕಾಂಬಾ ದೇವಾಲಯದ ಧರ್ಮದರ್ಶಿ ಮಂಡಲಿಯ ಅಧ್ಯಕ್ಷರೂ ಆದ ಶ್ರೀ ಆರ್. ಜಿ. ರಾಯಕರ್ ಅವರು ಏಪ್ರಿಲ್ ಒಂದರಂದು ಕಮ್ಮಟವನ್ನು ಉದ್ಘಾಟಿಸಿ ಶುಭ ಕೋರಿದರು. ಪರಿವರ್ತನೆಯ ಈ ಕಾಲದಲ್ಲಿ ಬ್ಯಾಂಕುಗಳು ಜನರ ಭಾಷೆಯಲ್ಲಿ ವ್ಯವಹರಿಸುವ ಅಗತ್ಯವನ್ನು ಒತ್ತಿ ಹೇಳಿದ ಅವರು ಸ್ವಂತ ಖರ್ಚಿನಿಂದ ಕಮ್ಮಟದಲ್ಲಿ ಆಸಕ್ತಿ ವಹಿಸಿ ಭಾಗವಹಿಸುತ್ತಿರುವ ಅಭ್ಯರ್ಥಿಗಳ ಮನೋಭಾವವನ್ನು ಮೆಚ್ಚಿ, ಈ ಕಾರ್ಯಕ್ರಮವನ್ನು ಏರ್ಪಡಿಸಿದ ಸಮನ್ವಯ ಸಮಿತಿಯನ್ನು ಶ್ಲಾಘಿಸಿದರು. ಅಧ್ಯಕ್ಷತೆ ವಹಿಸಿದ್ದ ಪ್ರೊ. ಎಚ್ಚೆಸ್ಕೆಯವರು ಭಾವಸಂವಹನೆಯಲ್ಲಿ ಭಾಷೆ ಒಂದು ತೊಡಕಾಗಬಾರದು ಎಂದು ಸ್ಪಷ್ಟಪಡಿಸಿ, ಭಾಷೆ ಪಾರದರ್ಶಕವಾಗಿರಬೇಕೆಂದು ವಿವರಿಸಿದರು. ಮೈಸೂರು ಹಾಗೂ ಶಿವನಸಮುದ್ರಗಳಲ್ಲಿ ನಡೆದ ಕಮ್ಮಟಗಳಲ್ಲಿನ ಕಾರ್ಯಕ್ರಮಗಳನ್ನು ಪರಿಚಯಮಾಡಿಕೊಟ್ಟು ಇಂಥ ಕಾರ್ಯಕ್ರಮಗಳು ಹೆಚ್ಚಬೇಕಾದರೆ ಸರಕಾರದ ನೆರವು ಅಗತ್ಯ ಎಂದರು.

### ಸಹಕಾರ

ಶಿರಸಿಯ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನ ಕೇಶವೈನ ಸಭಾಂಗಣವನ್ನು ಕಾರ್ಯಶಿಬಿರಕ್ಕಾಗಿ 6 ದಿನಗಳ ಕಾಲ ತೆರವು ಮಾಡಿಕೊಡಲಾಗಿತ್ತು. ಮಾರಿಕಾಂಬಾ ದೇವಾಲಯದ ಧರ್ಮದರ್ಶಿಗಳು ಉದಾರ ಮನಸ್ಸಿನಿಂದ ಅಭ್ಯರ್ಥಿಗಳಿಗೆ ವಸತಿ ಕಲ್ಪಿಸಿಕೊಟ್ಟರು. ಸ್ಥಳೀಯ ಪತ್ರಕರ್ತರು, ಬ್ಯಾಂಕ್ ಅಧಿಕಾರಿಗಳು ಹಾಗೂ ರೋಟರಿ ಸದಸ್ಯರು ಈ ಕಾರ್ಯಕ್ರಮವನ್ನು ಆಸಕ್ತಿಯಿಂದ ವೀಕ್ಷಿಸಿ ಮುಕ್ತಕಂಠದಿಂದ ಸ್ವಾಗತಿಸಿದರು.

### ಪ್ರಬಂಧಗಳು

ಕಮ್ಮಟದಲ್ಲಿ ಭಾಗವಹಿಸುವ ಪ್ರತಿಯೊಬ್ಬ ಅಭ್ಯರ್ಥಿಯೂ ಬ್ಯಾಂಕಿಂಗ್ ವಿಷಯ ಕುರಿತು ಪ್ರಬಂಧವೊಂದನ್ನು ಮೊದಲೇ ಸಿದ್ಧಪಡಿಸಿಕೊಂಡು ಬರಬೇಕೆಂದು ತಿಳಿಸಲಾಗಿತ್ತು.

ಪ್ರಬಂಧಗಳ ವಿಷಯಗಳನ್ನು ಸಾಕಷ್ಟು ಮುಂಚೆ ಅಭ್ಯರ್ಥಿಗಳಿಗೆ ನೀಡಲಾಗಿತ್ತು. ಪ್ರಬಂಧ ರಚಕರು ತಮ್ಮ ಪ್ರಬಂಧಗಳನ್ನು ಕಮ್ಮಟದಲ್ಲಿ ಇತರ ಅಭ್ಯರ್ಥಿಗಳ ಮುಂದೆ ಓದಿದ ಅನಂತರ ಆ ಪ್ರಬಂಧಗಳ ಬಗ್ಗೆ ದೀರ್ಘ ಚರ್ಚೆ ನಡೆಯುತ್ತಿತ್ತು. ಪ್ರಬಂಧದ ವಿಷಯ ನಿರೂಪಣೆ, ಶೈಲಿ, ಸಮಗ್ರತೆ, ಪಾರಿಭಾಷಿಕ ಶಬ್ದಪ್ರಯೋಗ, ಪ್ರಬಂಧದ ಶೀರ್ಷಿಕೆ ಮುಂತಾದ ಅನೇಕ ವಿಷಯಗಳ ಬಗೆಗೆ ನಡೆದ ಚರ್ಚೆಯ ಆಧಾರದ ಮೇಲೆ ಪ್ರಬಂಧದಲ್ಲಿ ಅಗತ್ಯವಾದ ಬದಲಾವಣೆಗಳನ್ನು ಮಾಡುವಂತೆ ಸೂಚಿಸಲಾಗುತ್ತಿತ್ತು.

**ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧಗಳು**

1 ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆ
2 ನವೋನ್ಮೇಷ ಬ್ಯಾಂಕಿಂಗ್
3 ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆ
4 ಅರ್ಥವ್ಯವಸ್ಥೆಯಲ್ಲಿ ಷೇರು ಪೇಟೆಯ ಪಾತ್ರ
5 ರಫ್ತು ಉದರಿ ಖಾತರಿ ನಿಗಮ
6 ಯೂರೋ-ಕರೆನ್ಸಿ ಮಾರುಕಟ್ಟೆಗಳು
7 ಬ್ಯಾಂಕುಗಳಲ್ಲಿ ವಂಚನೆ ಪ್ರಕರಣಗಳು
8 ತೀರುವೆ ಮನೆಯ ಕಾರ್ಯವಿಧಾನ
9 ಬ್ಯಾಂಕುಗಳಲ್ಲಿ ಯಾಂತ್ರೀಕರಣ

**1 ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆ**

ಶಾಖಾ ವಿಸ್ತರಣೆಗೆ ಸಂಬಂಧಿಸಿದ ರಿಸರ್ವ್ ಬ್ಯಾಂಕಿನ ಪ್ರಸಕ್ತ ಲೈಸನ್ಸ್ ನೀಡಿಕೆ ನೀತಿ, ಶಾಖೆಗಳ ಹರಹಿನ ಬಗ್ಗೆ ಅಂಕಿ-ಅಂಶಗಳು ಮತ್ತಿತರ ವಿಷಯಗಳನ್ನೊಳಗೊಂಡ ಪ್ರಬಂಧದ ಮೇಲೆ ಚರ್ಚೆ ನಡೆಯಿತು. ಯೂನಿಟ್ ಬ್ಯಾಂಕಿಂಗ್ ವ್ಯವಸ್ಥೆ ಹಾಗೂ ಶಾಖಾ ಬ್ಯಾಂಕಿಂಗ್ ವ್ಯವಸ್ಥೆ ಇವುಗಳ ಬಗೆಗೆ ಇರುವ ವಾದಗಳನ್ನು ಪ್ರಬಂಧದಲ್ಲಿ ಪ್ರಸ್ತಾವಿಸಬೇಕೆಂದು ಸಲಹೆ ಮಾಡಲಾಯಿತಲ್ಲದೆ, ಪ್ರಬಂಧದಲ್ಲಿ ಅಂಕಿ-ಅಂಶಗಳನ್ನು ನೀಡುವಾಗ ಅವುಗಳಿಗೇ ಯಾಜಮಾನ್ಯ ಸಲ್ಲಿಸದೆ, ಆ ಅಂಕಿ-ಅಂಶಗಳು ವಿಷಯಕ್ಕೆ ಪೂರಕವಾಗುವಂತೆ ಅವನ್ನು ಬಳಸಬೇಕೆಂದು ಸೂಚಿಸಲಾಯಿತು.

**2 ನವೋನ್ಮೇಷ ಬ್ಯಾಂಕಿಂಗ್**

1970ರ ದಶಕದ ಮೊದಲ ಭಾಗದಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಉದಯಿಸಿದ 'ಇನೊವೇಟಿವ್ ಬ್ಯಾಂಕಿಂಗ್'ನ ಪರಿಕಲ್ಪನೆಯ ಪರಿಚಯ ಮಾಡಿಕೊಡುವ ಈ ಪ್ರಬಂಧದಲ್ಲಿ ನವೋನ್ಮೇಷ ಬ್ಯಾಂಕಿಂಗ್‌ನ ಪರಿಧಿಯಲ್ಲಿ ಬರುವ ವಿವಿಧ ಯೋಜನೆಗಳನ್ನು ವಿವರಿಸಲಾಗಿತ್ತು. ಪ್ರಬಂಧದ ಬಗ್ಗೆ ಚರ್ಚೆ ನಡೆದಾಗ, 'ನವೋನ್ಮೇಷ' ಶಬ್ದದ ವ್ಯುತ್ಪತ್ತಿಯು ಪ್ರಬಂಧದಲ್ಲಿ ವಿವರಿಸಿದಂತೆ ಇಲ್ಲವಾದ್ದರಿಂದ ಆ ಭಾಗವನ್ನು ಬದಲಿಸಬೇಕೆಂದೂ, ನವೋನ್ಮೇಷ ಬ್ಯಾಂಕಿಂಗಿನ ಇತಿಮಿತಿಗಳನ್ನು ಪ್ರಸ್ತಾಪಿಸಬೇಕೆಂದೂ ಸೂಚಿಸಲಾಯಿತು.

**3 ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆ**

ದೇಶೀಯ ಬ್ಯಾಂಕುಗಳು ಹಾಗೂ ಸಂಘಟಿತ ಬ್ಯಾಂಕುಗಳ ಕಾರ್ಯನಿರ್ವಹಣೆ, ಭಾರತದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಸ್ವರೂಪ, ಅದರಲ್ಲಿ ಆದ ಬದಲಾವಣೆ ಮುಂತಾದವನ್ನು ಪ್ರಬಂಧದಲ್ಲಿ ಚರ್ಚಿಸಲಾಗಿತ್ತು. ಇಡೀ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಆಗಬೇಕಾದ ಮೂಲಭೂತ ಬದಲಾವಣೆಗಳೇನೆಂಬುದನ್ನು ಪ್ರಬಂಧದಲ್ಲಿ ಚರ್ಚಿಸಬೇಕೆಂದೂ, ನಬಾರ್ಡ್ (ಕೃಷಿ ಮತ್ತು ಗ್ರಾಮಾಭಿವೃದ್ಧಿಗಾಗಿ ರಾಷ್ಟ್ರೀಯ ಬ್ಯಾಂಕ್), ಎಕ್ಸಿಮ್ ಬ್ಯಾಂಕ್ (ರಫ್ತಾಮದು ಬ್ಯಾಂಕ್), ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಹಾಗೂ ವಾಣಿಜ್ಯ ಬ್ಯಾಂಕುಗಳ ನಡುವಣ ಸಾಮರಸ್ಯದ ಅಗತ್ಯವನ್ನು ಪ್ರಬಂಧದಲ್ಲಿ ಎತ್ತಿ ತೋರಿಸಬೇಕೆಂದೂ ಸೂಚಿಸಲಾಯಿತು.

**4 ಅರ್ಥವ್ಯವಸ್ಥೆಯಲ್ಲಿ ಷೇರು ಪೇಟೆಯ ಪಾತ್ರ**

ಆರ್ಥಿಕ ಅಭಿವೃದ್ಧಿಕಾರ್ಯದಲ್ಲಿ ಬಂಡವಾಳದ ಅಗತ್ಯವನ್ನು ಒತ್ತಿ ಹೇಳಿ, ಮಧ್ಯಮವರ್ಗದ ಜನರ ಸಣ್ಣ ಪ್ರಮಾಣದ ಉಳಿತಾಯವನ್ನು ಸಂಗ್ರಹಿಸಲು ಷೇರು ಪೇಟೆಯ ಚಟುವಟಿಕೆಗಳು ಹೇಗೆ ನೆರವಾಗುವುವೆಂಬುದನ್ನು ಪ್ರಬಂಧದಲ್ಲಿ ವಿವರಿಸಲಾಗಿತ್ತು. ಪ್ರಬಂಧ ಕುರಿತು ಚರ್ಚೆ ನಡೆದು, ಬಂಡವಾಳದ ಬಗೆಗೆ ಪ್ರಬಂಧದಲ್ಲಿ ಬರೆದಿರುವ ರೀತಿಯು ಓದುಗರನ್ನು ತಪ್ಪುದಾರಿಗೆ ಎಳೆಯುವ ಸಾಧ್ಯತೆಯಿರುವುದರಿಂದ ಆ ಅಂಶವನ್ನು ಕೈಬಿಡಬೇಕು ಅಥವಾ ಸ್ಪಷ್ಟವಾಗಿ ವಿವರಿಸಬೇಕೆಂದು ಸಲಹೆ ಮಾಡಲಾಯಿತು. ಅರ್ಥವ್ಯವಸ್ಥೆ, ಷೇರುಪೇಟೆ ಹಾಗೂ ಷೇರು ವಿನಿಮಯ ಕೇಂದ್ರಗಳ ನಡುವಣ ಪರಸ್ಪರ ಸಂಬಂಧವನ್ನು ಸ್ಪಷ್ಟವಾಗಿ ಚಿತ್ರಿಸಬೇಕೆಂದೂ, ಷೇರು ವಿನಿಮಯ ಕೇಂದ್ರದ ಕಾರ್ಯವಿಧಾನವನ್ನು ಪರಿಚಯಿಸಬೇಕೆಂದೂ ಸಲಹೆ ಮಾಡಲಾಯಿತು.

**5 ರಫ್ತು ಉದರಿ ಖಾತರಿ ನಿಗಮ**

ರಫ್ತುದಾರರಿಗೆ ನೀಡುವ ಉದರಿಗೆ ಖಾತರಿ ನಿಗಮದ ಎಕ್ಸ್‌ಪೋರ್ಟ್ ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್ ಸ್ವರೂಪ, ಸಂಸ್ಥೆ ರಫ್ತು ಉದರಿ ನೀಡುವವರಿಗೆ ಒದಗಿಸುವ ವಿವಿಧ ಸೌಲಭ್ಯ ಇವನ್ನು ಪರಿಚಯಿಸುವ ಈ ಪ್ರಬಂಧದ ಬಗೆಗೆ ನಡೆದ ಸುದೀರ್ಘ ಚರ್ಚೆಯಲ್ಲಿ ಪಾರಿಭಾಷಿಕ ಶಬ್ದಗಳ ಪ್ರಯೋಗದಲ್ಲಿನ ವಿವಿಧ ಸಮಸ್ಯೆಗಳ ಪರಿಚಯ ಅಭ್ಯರ್ಥಿಗಳಿಗೆ ಉಂಟಾಯಿತು. ಪಾರಿಭಾಷಿಕ ಶಬ್ದಸೃಷ್ಟಿಯಲ್ಲಿ ಅರ್ಥಸ್ಪಷ್ಟತೆ, ಏಕರೂಪತೆ ಹಾಗೂ ಪದಮೈತ್ರಿ ಇವೆಲ್ಲವನ್ನೂ ಒಟ್ಟಿಗೆ ಸಾಧಿಸುವುದರ ಅನಿವಾರ್ಯತೆಯೂ ಕ್ಲಿಷ್ಟತೆಯೂ ಅಭ್ಯರ್ಥಿಗಳ ಅರಿವಿಗೆ ಬಂತು.

**6 ಯೂರೋ-ಕರೆನ್ಸಿ ಮಾರುಕಟ್ಟೆ**

ಒಂದು ಕರೆನ್ಸಿ ಚಲಾವಣೆಯಲ್ಲಿರುವ ದೇಶದ ಹೊರ

ಗಿರುವ ಹಣಕಾಸು ಕೇಂದ್ರಗಳು ಮತ್ತು ಹಣ ಮಾರುಕಟ್ಟೆಗಳಲ್ಲಿ ಆ ಕರೆನ್ಸಿಯ ಪೂರೈಕೆ, ಬೇಡಿಕೆ ಹಾಗೂ ಒದಗುವಿಕೆಯನ್ನು 'ಯೂರೋ-ಕರೆನ್ಸಿ ಮಾರುಕಟ್ಟೆ' ಎನ್ನಬಹುದು ಎಂದು ತಿಳಿಸಿ ಆ ಮಾರುಕಟ್ಟೆ ವಿಶ್ವ ಹಣ ಮಾರುಕಟ್ಟೆಯ ಮೇಲೆ ಬೀರುವ ಪರಿಣಾಮವನ್ನು ವಿವರಿಸುವ ಈ ಪ್ರಬಂಧದ ವಿಷಯ ಹಾಗೂ ಶೈಲಿಗಳು ಆಕರ್ಷಕವಾಗಿದ್ದುವು.

'ಯೂರೋ-ಕರೆನ್ಸಿ ಮಾರುಕಟ್ಟೆ' ಎಂಬ ಮಿಥ್ಯಾನಾಮ (ಮಿಸ್‌ನೋಮರ್) ಹೊಂದಿದ ಅಮೂರ್ತ ಕಲ್ಪನೆಯನ್ನು ಶುದ್ಧ ಕನ್ನಡದಲ್ಲಿ ಸರಳ ಹಾಗೂ ಸ್ಪಷ್ಟವಾಗಿ ಓದುಗರ ಮುಂದಿಡಬಹುದೆಂಬುದು ಅರಿವಿಗೆ ಬಂದು ಕನ್ನಡದ 'ಶಕ್ತಿ'ಯ ಬಗ್ಗೆ ಹೆಮ್ಮೆ ಎನಿಸಿತು. ಪ್ರಬಂಧವನ್ನು ಇನ್ನಷ್ಟು ಉತ್ತಮಗೊಳಿಸುವ ದಿಶೆಯಲ್ಲಿ ಚರ್ಚೆ ನಡೆದು ಕೆಲವೆಡೆ ಪಾರಿಭಾಷಿಕ ಶಬ್ದಗಳನ್ನೂ, ವಾಕ್ಯಗಳನ್ನೂ, ನಿರೂಪಣಕ್ರಮವನ್ನೂ ಬದಲಾಯಿಸುವಂತೆ ಸಲಹೆಗಳು ಬಂದುವು.

### 7 ಬ್ಯಾಂಕುಗಳಲ್ಲಿ ವಂಚನೆ ಪ್ರಕರಣ

ಬ್ಯಾಂಕುಗಳಲ್ಲಿ ಇತ್ತೀಚೆಗೆ ವಂಚನೆ ಪ್ರಕರಣಗಳು ಹೆಚ್ಚುತ್ತಿರುವುದನ್ನು ಪ್ರಸ್ತಾಪಿಸಿ, ಬ್ಯಾಂಕುಗಳಲ್ಲಿ ನಡೆಯಬಹುದಾದ ಹಲವಾರು ರೀತಿಯ ವಂಚನೆಗಳನ್ನು ಪ್ರಬಂಧದಲ್ಲಿ ಪಟ್ಟಿ ಮಾಡಲಾಗಿತ್ತು. ವಂಚನೆಯ ಹಿಂದಿರುವ ಮಾನವಸ್ವಭಾವದ ಸರಳ ವಿಶ್ಲೇಷಣೆಯನ್ನೂ ಪ್ರಬಂಧ ಒಳಗೊಂಡಿತ್ತು. ಪ್ರಬಂಧದ ಮೇಲೆ ದೀರ್ಘ ಚರ್ಚೆ ನಡೆದು 'ವಂಚನೆ' ಎಂಬುದರ ವ್ಯಾಖ್ಯೆಯನ್ನು ವೈಜ್ಞಾನಿಕವಾಗಿ ನೀಡಬೇಕೆಂದೂ, ಬ್ಯಾಂಕುಗಳಲ್ಲಿ ಹಾಲಿ ಇರುವ ಲೆಕ್ಕ ಪದ್ಧತಿ ಹಾಗೂ ಕಾರ್ಯವಿಧಾನಗಳಲ್ಲಿನ ಲೋಪದೋಷಗಳನ್ನೂ, ವಂಚನೆ ಪ್ರಕರಣಗಳನ್ನು ನಿವಾರಿಸಬೇಕಾದರೆ ಕೈಗೊಳ್ಳಬೇಕಾದ ಕ್ರಮಗಳನ್ನೂ ಪ್ರಬಂಧದಲ್ಲಿ ಸೂಚಿಸಬೇಕೆಂದು ಪ್ರಬಂಧಕಾರರಿಗೆ ಸಲಹೆ ಮಾಡಲಾಯಿತು.

### 8 ತೀರುವೆ ಮನೆಯ ಕಾರ್ಯವಿಧಾನ

ಒಂದೇ ಕೇಂದ್ರದಲ್ಲಿರುವ ಬೇರೆ ಬೇರೆ ಬ್ಯಾಂಕುಗಳ ನಾನಾ ಶಾಖೆಗಳಲ್ಲಿ ಪಾವತಿಯಾಗಬೇಕಾದ ಚೆಕ್ಕುಗಳು ಅತ್ಯಂತ ಶೀಘ್ರವಾಗಿ ಪಾವತಿಯಾಗುವಂತೆ ಮಾಡುವ ಉದ್ದೇಶದಿಂದ ಬ್ಯಾಂಕುಗಳು ರೂಪಿಸಿಕೊಂಡಿರುವ ತೀರುವೆ ಮನೆ ಹೇಗೆ ಕೆಲಸ ಮಾಡುತ್ತದೆ? ಈ ವಿಷಯವನ್ನು ಅತ್ಯಂತ ಕುತೂಹಲಕಾರಿಯಾಗಿ ಪರಿಚಯ ಮಾಡಿಕೊಡುವ ಪ್ರಯತ್ನ ಈ ಪ್ರಬಂಧದಲ್ಲಿತ್ತು. ಗೊಂದಲಮಯವಾಗಬಹುದಾಗಿದ್ದ ಈ ಪ್ರಬಂಧ, ಚಿತ್ತಾಕರ್ಷಕವಾದ ಶೈಲಿ ಹಾಗೂ ನೇರ ನಿರೂಪಣೆಯಿಂದ ತನ್ನ ಉದ್ದೇಶ ಸಾಧಿಸುವಲ್ಲಿ ಯಶಸ್ವಿಯಾಯಿತು. ಪ್ರಬಂಧದ ಮೇಲೆ ನಡೆದ ಚರ್ಚೆಯಲ್ಲಿ ತೀರುವೆ ಮನೆಯ ಮುಖ್ಯ ನಿಯಮಗಳ ಸ್ಥೂಲ ಪರಿಚಯ ಮಾಡಿಕೊಡಬೇಕೆಂದೂ, ವಿವಿಧ ಕೇಂದ್ರಗಳಲ್ಲಿಯ ತೀರುವೆ ಮನೆಗಳ ಕಾರ್ಯವಿಧಾನದಲ್ಲಿ ಇರಬಹುದಾದ ವ್ಯತ್ಯಾಸಗಳನ್ನು ತಿಳಿಸಬೇಕೆಂದೂ ಸಲಹೆ ಮಾಡಲಾಯಿತು.

### 9 ಬ್ಯಾಂಕುಗಳಲ್ಲಿ ಯಾಂತ್ರೀಕರಣ

ಬ್ಯಾಂಕುಗಳಲ್ಲಿ ಕಂಪ್ಯೂಟರುಗಳ ಬಳಕೆಯಿಂದ ಗ್ರಾಹಕರಿಗೆ ನೀಡಬಹುದಾದ ಹೆಚ್ಚಿನ ಸೌಲಭ್ಯಗಳು, ಶಾಖಾಜಾಲದ ನಿರ್ವಹಣೆಗೆ ನೆರವು, ಸಮಸ್ಯೆಗಳು ಮುಂತಾದವನ್ನು ಕುರಿತ ಈ ಪ್ರಬಂಧ ಭವಿಷ್ಯದ ಬೆಳವಣಿಗೆಗಳ ಇಣುಕು ನೋಟವಾಗಿತ್ತು.

### ಭಾಷಾಂತರ

ಬ್ಯಾಂಕಿಂಗ್ ವಿಷಯ ಕುರಿತ ಪ್ರೌಢ ಪ್ರಬಂಧಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರ ಮಾಡುವ ಸಾಮರ್ಥ್ಯವನ್ನು ಅಭ್ಯರ್ಥಿಗಳು ಪಡೆದುಕೊಳ್ಳುವಂತೆ ಮಾಡುವುದು ಕಮ್ಮಟದ ಉದ್ದೇಶಗಳಲ್ಲಿ ಒಂದು. ಈ ಉದ್ದೇಶ ಸಾಧಿಸಲು 'Journal of the Institute of Bankers'ನಿಂದ ಎರಡು ಪ್ರಬಂಧಗಳನ್ನು ಆಯ್ಕೆಮಾಡಿ ಅವನ್ನು ಅಭ್ಯರ್ಥಿಗಳಿಂದ ಭಾಷಾಂತರ ಮಾಡಿಸಲಾಯಿತು.

ಭಾಷಾಂತರ ಒಂದು ಅಸಿಧಾರಾವ್ರತ. ಮೂಲದ ಆಶಯವನ್ನು ಸಮರ್ಥವಾಗಿ ಗ್ರಹಿಸಿ, ಮೂಲಲೇಖಕರ ಭಾವನೆಗಳನ್ನು ಯಥಾವತ್ತಾಗಿ—ಎಂದರೆ ಹೊಸದಾಗಿ ಏನನ್ನೂ ಸೇರಿಸದೆ, ಮೂಲದಲ್ಲಿರುವ ಯಾವ ಅಂಶವನ್ನೂ ಬಿಡದೆ, ಮೂಲದಲ್ಲಿನ 'ಒತ್ತನ್ನು' ಬದಲಾಯಿಸದೆ—ಇನ್ನೊಂದು ಭಾಷೆಯಲ್ಲಿ ಮೂಡಿಸಬೇಕಾದುದು ಸಾಮಾನ್ಯ ಕೆಲಸವಲ್ಲ.

ಇಂಗ್ಲಿಷಿನ ಒಂದು ಶಬ್ದಕ್ಕೆ ಹಲವಾರು ಅರ್ಥಗಳಿರುತ್ತವೆ. ಆ ಅರ್ಥಗಳಲ್ಲಿ ಲೇಖಕ ಉದ್ದೇಶಿಸಿರುವ ಅರ್ಥ ಯಾವುದೆಂಬುದನ್ನು ತಿಳಿಯುವುದೂ ಕಷ್ಟವೇ. ಅದನ್ನು ತಿಳಿದುಕೊಂಡ ಮೇಲೆ ಅದೇ ಅರ್ಥವನ್ನು ಕೊಡುವ ಕನ್ನಡ ಶಬ್ದವನ್ನು ಹುಡುಕಬೇಕಾಗುತ್ತದೆ. ಶಬ್ದಗಳೆರಡರ ಅರ್ಥ ಒಂದೇ ಎಂದು ಮೇಲ್ನೋಟಕ್ಕೆ ತೋರಿದರೂ ವಾಸ್ತವಿಕವಾಗಿ ಅದು ಹಾಗಿರುವುದಿಲ್ಲ. ಅರ್ಥಗಳ ಛಾಯೆಯಲ್ಲಿ ವ್ಯತ್ಯಾಸವಿರುತ್ತದೆ. ಹಾಗೆ ನೋಡಿದರೆ ಭಾಷೆಯಲ್ಲಿ ಒಂದೇ ಅರ್ಥ ಕೊಡುವ ಎರಡು ಶಬ್ದಗಳು ಇಲ್ಲವೆಂದೇ ಹೇಳಬಹುದೇನೋ. ಹೀಗಾಗಿ ಭಾಷಾಂತರಕಾರ ಉಚಿತ ಪದಗಳ ಆಯ್ಕೆಗಾಗಿ ತುಂಬ ಶ್ರಮವಹಿಸಬೇಕಾಗುತ್ತದೆ. ಒಂದು ಭಾಷೆಯ ಶಬ್ದವೊಂದಕ್ಕೆ ಸಮಾನಾರ್ಥಕವಾಗಿ ಇನ್ನೊಂದು ಭಾಷೆಯಲ್ಲಿ ಒಂದು ಶಬ್ದ ಇರಲೇಬೇಕೆಂದಿಲ್ಲ. ಇದ್ದುದರಲ್ಲಿ ಅತ್ಯಂತ

ಯುಕ್ತವಾದ ಪದವನ್ನು ಆಯ್ದು ಅದನ್ನು ಪ್ರಯೋಗಿಸುವಲ್ಲಿ ಭಾಷಾಂತರಕಾರನು ಕೌಶಲ ತೋರಬೇಕಾಗುತ್ತದೆ.

ಇಂಗ್ಲಿಷಿನ ವಾಕ್ಯರಚನಾಕ್ರಮ ಕನ್ನಡದ್ದಕ್ಕಿಂತ ಬೇರೆಯಾಗಿರುವುದರಿಂದ ಭಾಷಾಂತರದಲ್ಲಿ ಹಲವು ರೀತಿಯ ತೊಡಕುಗಳುಂಟಾಗುತ್ತವೆ. ಇಲ್ಲಿ ಮೂಲದ 'ಒತ್ತು' ಬದಲಾಗುವ ಭೀತಿಯೂ ಕನ್ನಡದ ಜಾಯಮಾನವನ್ನು ಉಳಿಸಿಕೊಳ್ಳುವ ಕಳಕಳಿಯೂ ಭಾಷಾಂತರಕಾರನನ್ನು ಪೇಚಿಗೆ ಸಿಕ್ಕಿಸುತ್ತವೆ. ಪದಕ್ಕೆ ಪದವಿಟ್ಟು ಭಾಷಾಂತರ ಮಾಡುವುದು ಬಾಲಿಶವಾದುದು ಹಾಗೂ ತೀರ ಅನಪೇಕ್ಷಣೀಯವಾದುದು. ಆದರೆ ಮೂಲದ ಸಾರಗ್ರಹಣ ಮಾಡಿ ಅದನ್ನು ಕನ್ನಡದಲ್ಲಿ 'ಹೇಳಿ ಮುಗಿಸಿಬಿಡುವುದು' ಸಮಸ್ಯೆಯನ್ನು ಹಗುರಗೊಳಿಸಿದಂತೆ.

ಭಾಷಾಂತರಕಾರ್ಯದ ಮಹತ್ವವನ್ನು ಕುರಿತಂತೆ ಈ ಮಾತುಗಳನ್ನು ಪ್ರೊ. ಎಚ್ಚೆಸ್ಕೆಯವರು ಕಮ್ಮಟದಲ್ಲಿ ಭಾಗವಹಿಸಿದ ಅಭ್ಯರ್ಥಿಗಳಿಗೆ ಮನಮುಟ್ಟುವಂತೆ ವಿವರಿಸಿದರು.

ಈ ಮೊದಲು ತಿಳಿಸಿದ ಆಂಗ್ಲ ಪ್ರಬಂಧಗಳನ್ನು ಅಭ್ಯರ್ಥಿಗಳು ಭಾಷಾಂತರ ಮಾಡಿಕೊಂಡು ಬಂದಿದ್ದರು. ಮೂಲ ಪ್ರಬಂಧದ ಹಾಗೂ ಭಾಷಾಂತರದ ವಾಕ್ಯಗಳನ್ನು ಒಂದೊಂದಾಗಿ ಓದಿ, ಪರಿಶೀಲಿಸಿ, ಪ್ರತಿ ಶಬ್ದದ ಬಗ್ಗೆಯೂ ಚರ್ಚೆ ನಡೆಸಿ ಕಮ್ಮಟದಲ್ಲಿ ಭಾಷಾಂತರವನ್ನು ಪರಿಷ್ಕರಿಸಲಾಯಿತು.

**ಒಂದು ಉದಾಹರಣೆ**

ಭಾಷಾಂತರ ಮಾಡಲಾದ ಪ್ರಬಂಧದ ಒಂದು ಭಾಗ ಹೀಗಿದೆ :

Whilst the trend towards world banking and an internationalisation of business has continued, no truly multinational bank—for instance with multinational equity—has not yet emerged. Every international bank remains tied by its equity capital to its home currency, suffering loss of profitability on its international operations when their currency is strong and impairment to its capital when that currency is weak.

**ಇದರ ಭಾಷಾಂತರ**

ವಿಶ್ವ ಬ್ಯಾಂಕಿಂಗ್ ಮತ್ತು ವ್ಯವಹಾರದ ಅಂತರರಾಷ್ಟ್ರೀಕರಣದತ್ತ ಒಲವು ಮುಂದುವರಿದಿದೆಯಾದರೂ, ನಿಜವಾದ ಬಹುರಾಷ್ಟ್ರೀಯ ಬ್ಯಾಂಕು—ಉದಾಹರಣೆಗೆ ಬಹುಕರೆನ್ಸಿ ಬಂಡವಾಳವುಳ್ಳ ಬ್ಯಾಂಕು—ಇನ್ನೂ ಉದ್ಭವಿಸಿಲ್ಲ. ಪ್ರತಿ ಅಂತರರಾಷ್ಟ್ರೀಯ ಬ್ಯಾಂಕೂ ತನ್ನ ಷೇರುಬಂಡವಾಳದ ಮೂಲಕ ತನ್ನ ದೇಶೀಯ ಕರೆನ್ಸಿಗೇ ಬದ್ಧವಾಗಿರುತ್ತದೆ. ಇದರ ಪರಿಣಾಮವೆಂದರೆ ಆ ಕರೆನ್ಸಿ ಬಲಿಷ್ಠವಾಗಿರುವಾಗ ಅಂತರರಾಷ್ಟ್ರೀಯ ಕಲಾಪಗಳಲ್ಲಿ ಅದರ ಲಾಭಪ್ರದತೆ ಕುಗ್ಗುತ್ತದೆ ಹಾಗೂ ಆ ಕರೆನ್ಸಿ ದುರ್ಬಲವಾಗಿರುವಾಗ ಬ್ಯಾಂಕಿನ ಬಂಡವಾಳಸ್ಥಿತಿ ಹಾನಿಗೊಳ್ಳುತ್ತದೆ.

**ಪಾರಿಭಾಷಿಕ ಶಬ್ದಗಳ ಬಳಕೆ, ಸೃಷ್ಟಿ**

ಆರು ದಿನಗಳ ಕಾಲ ಪ್ರಬಂಧರಚನೆ, ಭಾಷಾಂತರ ಮತ್ತಿತರ ವಿಷಯಗಳನ್ನು ಕುರಿತು ಚರ್ಚಿಸಲಾಯಿತಾದರೂ ನಡುವೆ ಅವ್ಯಾಹತವಾಗಿ ಪಾರಿಭಾಷಿಕ ಶಬ್ದಗಳ ಪ್ರಯೋಗದ ಬಗ್ಗೆ ವಾದ ವಿವಾದಗಳು ನಡೆಯುತ್ತಲೇ ಇದ್ದುವು.

ಪಾರಿಭಾಷಿಕ ಶಬ್ದಗಳ ಸಮಸ್ಯೆ ಭಾಷಾಂತರಕಾರನಿಗೆ ಒಂದು ತಲೆನೋವು. ಮೂಲಪದವೊಂದು ಜನಮನದಲ್ಲಿ ಮುದ್ರಿತವಾಗಿರುವಾಗ ಅದರ ಸ್ಥಾನದಲ್ಲಿ ಇನ್ನೊಂದು ಪದವನ್ನು ಆಯ್ದು ನಾಟುವ ಕೆಲಸ ಸುಲಭವಲ್ಲ. ಈ ದೃಷ್ಟಿಯಿಂದ ಬ್ಯಾಂಕ್, ಚೆಕ್, ಕೌಂಟರ್ ಮುಂತಾದ ಅನೇಕ ಇಂಗ್ಲಿಷ್ ಶಬ್ದಗಳನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಹೀಗೆ ಮಾಡುವಾಗ ಕನ್ನಡದ ಜಾಯಮಾನಕ್ಕೆ ಹೊಂದುವಂತೆ ಸ್ವಲ್ಪ ಮಾರ್ಪಾಟು ಅಗತ್ಯವಾಗುತ್ತದೆ. ಉದಾ : ಚೆಕ್-ಚೆಕ್ಕು, ಬ್ಯಾಂಕ್-ಬ್ಯಾಂಕು. ಹೀಗೆ ಹಲವೊಮ್ಮೆ ಕೇವಲ ಒಂದು ಕೊಂಬು ಸಿಕ್ಕಿಸುವುದರಿಂದ ಅನ್ಯಭಾಷೆಯ ಪದಗಳು ಪಶುವಿನಂತೆ ನಮ್ಮ ಹತೋಟಿಗೆ ಬರುತ್ತವೆ. ಅವಕ್ಕೆ ಕನ್ನಡದ ವಿಭಕ್ತಿ ಪ್ರತ್ಯಯಗಳನ್ನು ಸುಲಭವಾಗಿ ಹಚ್ಚಬಹುದು. ಶಾಸ್ತ್ರಾಧ್ಯಾಯಿಗಳಿಗೆ ಅನುಕೂಲವಾಗುವಂತೆ ಪಾರಿಭಾಷಿಕ ಶಬ್ದಗಳು ಸಾಧ್ಯವಾದ ಮಟ್ಟಿಗೆ ಎಲ್ಲ ಭಾರತೀಯ ಭಾಷೆಗಳಲ್ಲೂ ಒಂದೇ ಆಗಿರಬೇಕು ಎಂಬುದು ಒಂದು ಆದರ್ಶ. ಹಾಗಿರುವುದು ಸಾಧ್ಯವಾಗುವುದಿಲ್ಲವಾದರೆ ಬೇರೆ ಪದವನ್ನು ಹಾಕಿಕೊಳ್ಳಬಹುದು. ಭೌತ ವಿಜ್ಞಾನಗಳಿಗೆ ಸಂಬಂಧಿಸಿದಂತೆ ಪಾರಿಭಾಷಿಕ ಶಬ್ದಗಳ ಸಮಸ್ಯೆ ಒಂದು ರೀತಿಯದಾದರೆ, ಸಮಾಜ ವಿಜ್ಞಾನಗಳಿಗೆ ಸಂಬಂಧಿಸಿದ ಶಬ್ದಗಳ ಸಮಸ್ಯೆ ಇನ್ನೊಂದು ರೀತಿಯದು.

ಮೊದಲನೆಯದರಲ್ಲಿ ಸಂಬಂಧಿಸಿದ ಶಬ್ದಗಳು ಪಂಡಿತವರ್ಗ ಅಥವಾ ವಿದ್ಯಾರ್ಥಿವರ್ಗದಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟರೆ, ಎರಡನೆಯದರಲ್ಲಿ ಅವನ್ನು ಸಾಮಾನ್ಯರೂ ಬಳಸಬೇಕಾಗುತ್ತದೆ. ಆದ್ದರಿಂದ ಸಮಾಜ ವಿಜ್ಞಾನಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳು ಅರ್ಥವ್ಯತ್ಯಾಸ ಧ್ವನಿವ್ಯತ್ಯಾಸಗಳನ್ನು ಹೊಂದುವ ಸಾಧ್ಯತೆ ಹೆಚ್ಚು. ಹೀಗಾಗಿ, ಬ್ಯಾಂಕಿಂಗ್ ನಂತಹ ವಿಷಯದಲ್ಲಿ ಪಂಡಿತರು ದಂತಗೋಪುರಗಳಲ್ಲಿ ಕುಳಿತು ಟಂಕಿಸಿದ ಶಬ್ದ ಬಳಕೆಗೆ ಬಾರದೆ ಅದರ ಸ್ಥಾನದಲ್ಲಿ ಬೇರೆ ಯಾವುದೋ ಶಬ್ದ ಬಳಕೆಗೆ ಬರಬಹುದು.

**ಮುಖ್ಯ ಲಕ್ಷಣಗಳು**

ಪಾರಿಭಾಷಿಕ ಶಬ್ದಗಳಿಗೆ ಇರಬೇಕಾದ ಲಕ್ಷಣಗಳಲ್ಲಿ ಬಹು ಮುಖ್ಯವಾದವೆಂದರೆ ಅರ್ಥಸ್ಪಷ್ಟತೆ ಹಾಗೂ ಉತ್ಪಾದಕತೆ. ಒಂದು ಶಬ್ದವನ್ನು ಪ್ರಯೋಗಿಸಿದಾಗ ಅರ್ಥ ಓದುಗರಿಗೆ ಸ್ಪಷ್ಟವಾಗಬೇಕು, ಗೊಂದಲವುಂಟಾಗಬಾರದು. ಎರಡನೆಯದಾಗಿ, ಪಾರಿಭಾಷಿಕಪದದಿಂದ ಹೊಸ ಪದಗಳ ವ್ಯುತ್ಪತ್ತಿ ಪಡೆಯುವಂತಿರಬೇಕು.

ಉದಾ : Manager ಎಂಬ ಶಬ್ದಕ್ಕೆ ಕನ್ನಡದಲ್ಲಿ ಶಬ್ದವೊಂದನ್ನು ಆಯುವಾಗ ಆ ಶಬ್ದದ ರೂಪಾಂತರದಿಂದಲೇ Manage, Management, Managerial ಮುಂತಾದ ಪದಗಳಿಗೆ ಸಮಾನಾರ್ಥಕ ಪದಗಳು ಉಂಟಾಗುವಂತಿರಬೇಕು. ಇಲ್ಲದಿದ್ದರೆ ಆ ಶಬ್ದಕ್ಕೆ ಉತ್ಪಾದಕತೆ ಇಲ್ಲವೆಂದು ತೀರ್ಮಾನಿಸಬೇಕಾಗುತ್ತದೆ.

ಆಧುನಿಕ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಳಸುವ ನೂರಾರು ಪಾರಿಭಾಷಿಕ ಶಬ್ದಗಳಿಗೆ ಕನ್ನಡದ ಸಮಾನ ಶಬ್ದಗಳನ್ನು ಕಮ್ಮಟದಲ್ಲಿ ಟಂಕಿಸಲಾಯಿತು.

ಉದಾ : credit–ಉದರಿ, remittance–ರವಾನೆ, overseas branch–ಸಾಗರೋತ್ತರ ಶಾಖೆ, offshore banking–ಕಡಲಾಚೆಯ ಬ್ಯಾಂಕಿಂಗ್, financial guarantee-ಹಣಕಾಸು ಖಾತರಿ, investment–ವಿನಿಯೋಜನೆ, Foreign Currency (Non-Resident) A/c-ವಿದೇಶಿ ಕರೆನ್ಸಿ (ಅನಿವಾಸಿ) ಖಾತೆ . . . ಇತ್ಯಾದಿ.

ಇದಲ್ಲದೆ ಬ್ಯಾಂಕುಗಳಲ್ಲಿ ಬಳಕೆಯಲ್ಲಿರುವ ಹುದ್ದೆಗಳ ಹೆಸರುಗಳು ಮುಂತಾದವನ್ನು ಕನ್ನಡೀಕರಿಸಲಾಯಿತು.

ಉದಾ : Chief Cashier-ಪ್ರಮುಖ ನಗದಿಗಾರ
Accounts Officer-ಲೆಕ್ಕಾಧಿಕಾರಿ
Credit Appraisal Cell-ಉದರಿ ನಿರ್ಧಾರಣ ಕೋಶ
Merchant Banking Division : ವಣಿಕ ಬ್ಯಾಂಕಿಂಗ್ ವಿಭಾಗ Chief Officer (Inter-Office A/cs) : ಮುಖ್ಯಾಧಿಕಾರಿ (ಅಂತರ ಕಛೇರಿ ಲೆಕ್ಕಗಳು)

**ನಮೂನೆ, ಮುದ್ರೆ ಮುಂತಾದವುಗಳ ಕನ್ನಡೀಕರಣ**

ಬ್ಯಾಂಕ್ ಮತ್ತು ಗ್ರಾಹಕರ ನಡುವಣ ಸಾಮಾನ್ಯ ವ್ಯವಹಾರ ಬಹುಮಟ್ಟಿಗೆ ನಮೂನೆಗಳ ಮುಖಾಂತರ ನಡೆಯತಕ್ಕದ್ದೇ. ಖಾತೆ ತೆರೆಯುವುದಕ್ಕೆ, ಖಾತೆಗೆ ಹಣ ತುಂಬುವುದಕ್ಕೆ, ಖಾತೆಯಿಂದ ಹಣ ಪಡೆಯುವುದಕ್ಕೆ, ಖಾತೆಯನ್ನು ಬರಖಾಸ್ತುಗೊಳಿಸುವುದಕ್ಕೆ—ನಿಗದಿಯಾದ ಪ್ರತ್ಯೇಕ ನಮೂನೆಗಳು ಬ್ಯಾಂಕುಗಳಲ್ಲಿರುತ್ತವೆ. ಈ ನಮೂನೆಗಳನ್ನೆಲ್ಲ ಕನ್ನಡದಲ್ಲಿ ತಯಾರಿಸಿ ಬಳಸತೊಡಗಿದರೆ ಬ್ಯಾಂಕುಗಳಲ್ಲಿ ಕನ್ನಡ ಬಳಕೆಗೆ ಬಂದಂತೆಯೇ ಆಗುತ್ತದೆ. ಈ ದೃಷ್ಟಿಯಿಂದ ನಮೂನೆಗಳ ಕನ್ನಡೀಕರಣ ಅಗತ್ಯ.

ಬ್ಯಾಂಕಿನ ದೈನಂದಿನ ವ್ಯವಹಾರದಲ್ಲಿ ಬಳಸುವ ಹಲವಾರು ನಮೂನೆಗಳನ್ನು ಶಿವನಸಮುದ್ರದಲ್ಲಿ ನಡೆದ ಕಮ್ಮಟದಲ್ಲಿ ಕನ್ನಡೀಕರಿಸಲಾಗಿದೆ.

ಶಿರಸಿಯ ಕಮ್ಮಟದಲ್ಲಿ ಬ್ಯಾಂಕುಗಳಲ್ಲಿ ಬಳಸುವ ಹಲವು ಮೊಹರುಗಳನ್ನು ಕನ್ನಡೀಕರಿಸಲಾಯಿತು.

ಉದಾ : 1 Received Payment
Through Bangalore Clearing House First Payee's Endorsement Guaranteed

Second Payee's Account Credited
State Bank of India (PB Division)
Bangalore City

ಬೆಂಗಳೂರು ತೀರುವೆ ಮನೆಯ ಮೂಲಕ
ಪಾವತಿ ಸ್ವೀಕರಿಸಿದೆ
ಮೊದಲನೆ ಪ್ರಾಪ್ತಿಕರ್ತನ ಹಿಂಬರಹಕ್ಕೆ ಖಾತರಿಯಿದೆ
ಎರಡನೆ ಪ್ರಾಪ್ತಿಕರ್ತನ ಖಾತೆಯನ್ನು ಧನಿಸಿದೆ
ಭಾರತೀಯ ಸ್ಟೇಟ್ ಬ್ಯಾಂಕ್ (ವೈಯಕ್ತಿಕ ಬ್ಯಾಂಕಿಂಗ್ ವಿಭಾಗ)
ಬೆಂಗಳೂರು ನಗರ

2 Pay Yourselves
Payee's Account Credited
For State Bank of India
Manager

ನಿಮಗೇ ಪಾವತಿ ಮಾಡಿಕೊಳ್ಳಿ
ಪ್ರಾಪ್ತಿಕರ್ತನ ಖಾತೆಯನ್ನು ಧನಿಸಿದೆ
ಭಾರತೀಯ ಸ್ಟೇಟ್ ಬ್ಯಾಂಕಿನ ಪರವಾಗಿ
ವ್ಯವಸ್ಥಾಪಕ

**ದಿನಚರಿ**

ಪ್ರತಿದಿನ ಬೆಳಗ್ಗೆ 9ರಿಂದ ಮಧ್ಯಾಹ್ನ 1ರ ವರೆಗೆ, ಮತ್ತೆ 2ರಿಂದ ಸಂಜೆ 6ರ ವರೆಗೆ ಕಾರ್ಯಕ್ರಮ ನಡೆಯುತ್ತಿತ್ತು. ಇದಾದ ಮೇಲೆಯೂ ಅಭ್ಯರ್ಥಿಗಳಲ್ಲಿ ಪರಸ್ಪರ ವಿಚಾರ ವಿನಿಮಯ ಮುಂದುವರಿಯುತ್ತಲೇ ಇರುತ್ತಿತ್ತು.

ಗೆಳೆಯರ ಒಡನಾಟದಲ್ಲಿ ಉಲ್ಲಾಸ ಚಿಮ್ಮುತ್ತಿತ್ತು. ಕಮ್ಮಟದಲ್ಲಿ ನಡೆಯಬೇಕಾದ ಕೆಲಸ ಸಾಕಷ್ಟು ಇದ್ದುದರಿಂದ ನೋಟ, ತಿರುಗಾಟಗಳಿಗೆ ಆಸ್ಪದವಿರಲಿಲ್ಲ. ಆದರೂ ಸ್ವಲ್ಪ ಬಿಡುವು ಮಾಡಿಕೊಂಡು ಪಂಪನ ಕ್ಷೇತ್ರವಾದ ಬನವಾಸಿಗೆ ಹೊರಟು ಮಧುಕೇಶ್ವರಾಲಯವನ್ನು ವೀಕ್ಷಿಸಿ ಬಂದೆವು. ಇನ್ನೊಂದು ಸಂಜೆ ಶಿರಸಿಗೆ ಸ್ವಲ್ಪ ದೂರದಲ್ಲಿರುವ ಸಹಸ್ರಲಿಂಗ ಕ್ಷೇತ್ರ ಹಾಗೂ ಸ್ವರ್ಣವಲ್ಲಿ ಸೋದೆ ಮಠಗಳಿಗೆ ಭೇಟಿಯಿತ್ತೆವು. ಪ್ರೊ. ಎಚ್ಚೆಸ್ಕೆಯವರ ವಿದ್ವತ್ಪೂರ್ಣ ವಿಚಾರಗಳನ್ನು ಆಲಿಸುತ್ತ ಸಮಯ ಹೋದದ್ದೇ ತಿಳಿಯು

ತ್ತಿರಲಿಲ್ಲ. ಅವರ ಸರಳ, ಸ್ನೇಹಮಯ ವ್ಯಕ್ತಿತ್ವದ ಸಾಮಿಪ್ಯದಲ್ಲಿ ಮನಸ್ಸು ಯಾವುದೋ ಸಂತೋಷವನ್ನು ಅನುಭವಿಸುತ್ತಿತ್ತು.

**ಅತಿಥಿ ಭಾಷಣಗಳು**

ಕಮ್ಮಟದಲ್ಲಿ ಹಲವು ಅತಿಥಿ ಭಾಷಣಗಳನ್ನೂ ಏರ್ಪಡಿಸ ಲಾಗಿತ್ತು. 3-4-83ರಂದು ಕೆನರಾ ಬ್ಯಾಂಕಿನ ಪರಿಹಾರ ಹಾಗೂ ಕಲ್ಯಾಣ ಸೊಸೈಟಿಯ ಪ್ರಧಾನ ವ್ಯವಸ್ಥಾಪಕರಾದ ಶ್ರೀ ರತ್ನಾಕರ ಕಾಮತರು ಬ್ಯಾಂಕಿಂಗ್‌ನಲ್ಲಿ ಇತ್ತೀಚಿನ ಧೋರಣೆಗಳನ್ನು ಕುರಿತು ತಮ್ಮ ಅನುಭವಗಳನ್ನು ಅಭ್ಯರ್ಥಿ ಗಳಿಗೆ ವಿವರಿಸಿದರು. ಅದೇ ದಿನ ಶಿರಸಿಯ ಅರ್ಬನ್ ಕೋ ಆಪರೇಟಿವ್ ಬ್ಯಾಂಕಿನ ನಿರ್ದೇಶಕರಾದ ಶ್ರೀ ವಿ. ಎಸ್. ಸೋಂದೆಯವರು ಅರ್ಬನ್ ಬ್ಯಾಂಕಿನ ಪ್ರಗತಿ ಹಾಗೂ ಶಿರಸಿಯಲ್ಲಿ ಮನೆಮಾತಾಗಿರುವ ಅದರ ಸಾಧನೆಯನ್ನು ಪರಿಚಯ ಮಾಡಿಕೊಟ್ಟರು.

5-4-83ರಂದು ಶಿರಸಿಯ ಅರ್ಬನ್ ಕೋ ಆಪರೇಟಿವ್ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರಾದ ಶ್ರೀ ಎಂ. ಎಸ್. ಪ್ರಭು ಅವರು ಸಹಕಾರಿ ಬ್ಯಾಂಕುಗಳ ಸಮಸ್ಯೆಗಳನ್ನು ಕುರಿತು ಅನುಭವಪೂರ್ಣ ಉಪನ್ಯಾಸ ನೀಡಿದರು.

**ಸಮಾರೋಪ**

ಕಾರ್ಯಕ್ರಮದ ಕೊನೆಯ ದಿನವಾದ ಏಪ್ರಿಲ್ 6ರಂದು ಕಮ್ಮಟದ ಸಮಾರೋಪವನ್ನು ಅರ್ಬನ್ ಬ್ಯಾಂಕಿನ ಅಧ್ಯಕ್ಷ ರಾದ ಶ್ರೀ ಎಸ್. ವಿ. ಕಾಸರಕೋಡ್ ಅವರು ನೆರವೇರಿ ಸಿದರು. ಸಮನ್ವಯ ಸಮಿತಿಯ ಕಾರ್ಯವನ್ನು ಶ್ಲಾಘಿಸಿದ ಶ್ರೀಯುತರು ಕಮ್ಮಟದ ಮಹತ್ವವನ್ನು ಮನಗಂಡು ಬ್ಯಾಂಕಿನ ಆಡಳಿತ ವರ್ಗವು 500 ರೂ. ನೆರವು ನೀಡಲು ತೀರ್ಮಾನಿಸಿದೆಯೆಂದು ಘೋಷಿಸಿದರು.

ಸಮಾರೋಪ ಸಮಾರಂಭ ನಡೆಯುತ್ತಿದ್ದಂತೆ ನಮಗೆ ಏನನ್ನೋ ಕಳೆದುಕೊಂಡ ಅನುಭವವಾಗತೊಡಗಿತು. ಶಿರಸಿ ಕಮ್ಮಟದ ನೆನಪುಗಳನ್ನು ಮೆಲುಕು ಹಾಕುತ್ತ, ಮುಂದಿನ ಕಮ್ಮಟ ಹೇಗಿರಬೇಕು ಎಂದು ಕಲ್ಪಿಸಿಕೊಳ್ಳುತ್ತ ಭಾರವಾದ ಹೃದಯದಿಂದ ಮಿತ್ರರು ಪರಸ್ಪರರನ್ನು ಬೀಳ್ಕೊಟ್ಟೆವು.

---

ವಿದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಆಡಳಿತ–3

# ಆಸ್ಟ್ರೇಲಿಯದಲ್ಲಿ

ಸಾ. ಅ. ಮಂಜುನಾಥ

### ಸ್ವರೂಪ

ಜಗತ್ತಿನ ಅತಿ ಚಿಕ್ಕ ಖಂಡ ಆಸ್ಟ್ರೇಲಿಯ. ಈ ಖಂಡ ಇಡಿಯಾಗಿ ಒಂದು ಆಡಳಿತಕ್ಕೆ ಒಳಪಟ್ಟಿದೆ. ಪ್ರಜಾತಂತ್ರ ವ್ಯವಸ್ಥೆಯುಳ್ಳ ಈ ದೇಶದ ಆಡಳಿತದ ಮುಖ್ಯಸ್ಥ ಗವರ್ನರ್-ಜನರಲ್. ದೇಶದ ಆರ್ಥಿಕ ನೀತಿಗಳನ್ನು, ಜನ ಕಲ್ಯಾಣ ಕಾರ್ಯಕ್ರಮಗಳನ್ನು ನಿರ್ಧಾರ ಮಾಡುವುದು ದೇಶದ ಸರಕಾರ.

ದೇಶದ ಕೇಂದ್ರ ಬ್ಯಾಂಕ್ ಆದ ಅಲ್ಲಿಯ ರಿಸರ್ವ್ ಬ್ಯಾಂಕು ದೇಶದ ಆರ್ಥಿಕ ಅಭ್ಯುದಯ ಮತ್ತು ಹಣಕಾಸಿನ ನೀತಿಗಳನ್ನು ಜಾರಿಗೆ ತರುವ ಕರ್ತವ್ಯಗಳನ್ನು ಹೊಂದಿದೆ. ಆರ್ಥಿಕ ಕ್ಷೇತ್ರದಲ್ಲಿ ದೇಶದ ಆರ್ಥಿಕ ನೀತಿಗಳನ್ನು ಜಾರಿಗೆ ತರುವ ಮುಖ್ಯ ಹೊಣೆಗಾರ ಈ ರಿಸರ್ವ್ ಬ್ಯಾಂಕ್. ಈ ಬ್ಯಾಂಕಿನ ಬಂಡವಾಳ ಪೂರ್ಣವಾಗಿ ಸರಕಾರದ ಸ್ವತ್ತು. ಈ ಕೇಂದ್ರ ಬ್ಯಾಂಕಿಗೂ ಸರಕಾರಕ್ಕೂ ನಡುವೆ ನೌಕರರ ವಿನಿಮಯಕ್ಕೆ ಅವಕಾಶವಿದೆ.

### ಕೇಂದ್ರ ಬ್ಯಾಂಕಿನ ವಿಧಿಬದ್ಧ ಕರ್ತವ್ಯಗಳು

1 ದೇಶದ ಚಾಲ್ತಿಹಣದ ಆಂತರಿಕ ಮೌಲ್ಯವನ್ನು ಕಾಪಾಡಿಕೊಳ್ಳುವುದು,
2 ದೇಶದ ಚಾಲ್ತಿಹಣದ ಬಾಹ್ಯ ಮೌಲ್ಯವನ್ನು ನಿಯಂತ್ರಿಸುವುದು,
3 ದೇಶದಲ್ಲಿ ಪೂರ್ಣ ಉದ್ಯೋಗಾವಕಾಶವನ್ನು ವ್ಯವಸ್ಥೆಗೊಳಿಸುವುದು.

### ಹೊಣೆಗಾರಿಕೆಗಳು

ತನ್ನ ನೀತಿಗಳ ಕುರಿತಾಗಿ ಸರಕಾರಕ್ಕೆ ಆಗಿಂದಾಗ್ಗೆ ಮಾಹಿತಿಗಳನ್ನು ನೀಡಬೇಕಾದ್ದು ಕೇಂದ್ರ ಬ್ಯಾಂಕಿನ ಹೊಣೆಗಾರಿಕೆಗಳಲ್ಲೊಂದು. ದೇಶದ ಹಣದ ವಿನಿಮಯದರಕ್ಕೆ ಸಂಬಂಧಿಸಿದಂತೆ ದೇಶದ ರಿಸರ್ವ್ ಬ್ಯಾಂಕಿನ ಗವರ್ನರ್, ಹಣಕಾಸು ಖಾತೆಯ ಕಾರ್ಯದರ್ಶಿ ಮತ್ತು ದೇಶದ ಪ್ರಧಾನ ಮಂತ್ರಿಯ ಕಾರ್ಯದರ್ಶಿ ಇವರು ಹೊಣೆಗಾರರಾಗಿರುತ್ತಾರೆ.

### ಸರಕಾರದ ಅಧಿಕಾರ

ಕೇಂದ್ರ ಬ್ಯಾಂಕಿಗೂ ಸರಕಾರಕ್ಕೂ ಯಾವುದೇ ವಿಷಯದಲ್ಲಿ ಭಿನ್ನಾಭಿಪ್ರಾಯ ಉಂಟಾದರೆ ಅಂತಿಮ ನಿರ್ಧಾರದ ವಿಧಿಬದ್ಧ ಅಧಿಕಾರ ಸರಕಾರದ್ದೇ ಆಗಿರುತ್ತದೆ. ಸೂಕ್ತ ಪರಾಮರ್ಶೆಗಳಾದ ಅನಂತರ ನಿರ್ದಿಷ್ಟ ನೀತಿಯನ್ನು ಅನುಸರಿಸುವಂತೆ ರಿಸರ್ವ್ ಬ್ಯಾಂಕಿಗೆ ಸೂಚಿಸುವ ಅಧಿಕಾರ ಸರಕಾರಕ್ಕೆ ಇದೆ. ಇಂಥದೇ ವಿಷಯವನ್ನು ದೇಶದ ಪಾರ್ಲಿಮೆಂಟಿಗೆ ಹದಿನೈದು ದಿನಗಳೊಳಗೆ ತಿಳಿಸಬೇಕಾದ್ದು ಸರಕಾರದ ಕರ್ತವ್ಯ. ಕೇಂದ್ರ ಬ್ಯಾಂಕಿನ ವಾರ್ಷಿಕ ವರದಿ ಮತ್ತು ಹಣಕಾಸಿನ ತಃಖ್ತೆಗಳನ್ನು ಪಾರ್ಲಿಮೆಂಟಿನ ಎರಡೂ ಸದನಗಳಿಗೆ—60 ಸದಸ್ಯರುಳ್ಳ ಸೆನೆಟ್ ಅಥವಾ ಮೇಲ್ಮನೆ ಮತ್ತು 124 ಸದಸ್ಯರುಳ್ಳ ಹೌಸ್ ಆಫ್ ರೆಪ್ರೆಸೆಂಟೆಟಿವ್ಸ್ ಅಥವಾ ಕೆಳಮನೆ ಇವಕ್ಕೆ—ಸಲ್ಲಿಸಲಾಗುತ್ತದೆ.

### ಕೇಂದ್ರ ಬ್ಯಾಂಕಿನ ರಚನಾ ಸ್ವರೂಪ

ದೇಶದ ಕೇಂದ್ರ ಬ್ಯಾಂಕ್ ಆದ ರಿಸರ್ವ್ ಬ್ಯಾಂಕಿನ ಆಡಳಿತದ ಹೊಣೆ 10 ಜನ ಸದಸ್ಯರನ್ನುಳ್ಳ ಒಂದು ಮಂಡಳಿಯದಾಗಿರುತ್ತದೆ. ಈ ಮಂಡಳಿಯಲ್ಲಿ ಒಬ್ಬ ಗವರ್ನರ್, ಒಬ್ಬ ಉಪಗವರ್ನರ್ ಮತ್ತು ಇತರೆ 8 ಜನ ಸದಸ್ಯರಿರುತ್ತಾರೆ. ಈ ಸದಸ್ಯರಲ್ಲಿ ಒಬ್ಬ ದೇಶದ ಹಣಕಾಸು ಖಾತೆಯ ಕಾರ್ಯದರ್ಶಿಯಾಗಿದ್ದು ಆ ಪದನಿಮಿತ್ತವಾಗಿ (ಎಕ್–ಅಫಿಷಿಯೊ) ಈ ಮಂಡಳಿಯ ಸದಸ್ಯತ್ವ ಹೊಂದಿರುತ್ತಾನೆ. ಉಳಿದ ಏಳು ಜನರಲ್ಲಿ ಇಬ್ಬರಿಗಿಂತ ಹೆಚ್ಚಿಲ್ಲದ ಸದಸ್ಯರು ರಿಸರ್ವ್ ಬ್ಯಾಂಕಿನ ಅಧಿಕಾರಿಗಳಾಗಿರ

ಬಹುದು ಅಥವಾ ಸರಕಾರದ ಇಲಾಖೆಗಳ ಅಧಿಕಾರಿಗಳಾಗಿರಬಹುದು. ಮಂಡಳಿಯ ಸದಸ್ಯರ ಆಯ್ಕೆಯನ್ನು ಸಾಮಾನ್ಯವಾಗಿ ಶಿಕ್ಷಣ, ಕೃಷಿ ಅಥವಾ ಸಾಮಾನ್ಯವಾಣಿಜ್ಯ ಚಟುವಟಿಕೆಗಳಲ್ಲಿ ಅವರು ಪಡೆದಿರುವ ಪ್ರಾವೀಣ್ಯದ ಆಧಾರದ ಮೇಲೆ ಮಾಡಲಾಗುತ್ತದೆ. ಗವರ್ನರನನ್ನು ಏಳು ವರ್ಷಗಳ ಅವಧಿಗೆ ದೇಶದ ಗವರ್ನರ್-ಜನರಲ್ ನೇಮಿಸುತ್ತಾನೆ. ಉಪಗವರ್ನರ್ ಸಹ ಹೀಗೆಯೇ ಏಳು ವರ್ಷಗಳ ಅವಧಿಗೆ ಗವರ್ನರ್-ಜನರಲ್ಲನಿಂದ ನೇಮಿಸಲ್ಪಡುತ್ತಾನೆ.

ಮಂಡಳಿಯ ಸಭೆಯ ಕಾರ್ಯ ನಿರ್ವಹಿಸಲು ಗವರ್ನರ್ ಅಥವಾ ಉಪಗವರ್ನರ್ ಸೇರಿದಂತೆ ಕನಿಷ್ಠ 6 ಮಂದಿ ಸದಸ್ಯರು ಹಾಜರಿರಬೇಕಾಗುತ್ತದೆ. ಹಾಜರಿದ್ದು ಮತನೀಡಿದ ಸದಸ್ಯರ ಬಹುಸಂಖ್ಯೆಯು ಆಧಾರದ ಮೇಲೆ ನಿರ್ಣಯಗಳನ್ನು ಮಾಡಲಾಗುತ್ತದೆ. ಸಭೆಯ ಅಧ್ಯಕ್ಷನಿಗೆ ತನ್ನ ಒಂದು ಮತವಲ್ಲದೆ ಅಧ್ಯಕ್ಷನಾಗಿ ಚಲಾಯಿಸುವ ಒಂದು ನಿರ್ಣಾಯಕ (ಕ್ಯಾಸ್ಟಿಂಗ್) ಮತವೂ ಇರುತ್ತದೆ.

---

## ಒಂದು ಹೆಣ್ಣಿನ ಕಥೆ

ನನಗೀಗ 34 ವರ್ಷ ವಯಸ್ಸು. ನಾನು ಹುಟ್ಟಿದುದು ಟಂಕಸಾಲೆಯ ಒಂದು ಮೂಲೆಯಲ್ಲಿ. ನನ್ನ ಹೆತ್ತವರು ಮುತ್ತಿಟ್ಟು ಕರೆದರು ನನ್ನನ್ನು 'ರೂಪಾಯಿ' ಎಂದು. ಆದರೆ ಜನರು ನನ್ನನ್ನು ಪ್ರೀತಿಯಿಂದ 'ರೂಪಿ' ಎಂದೇ ಕರೆದರು. ಬಾಲ್ಯದಲ್ಲಿ ನಾನು ಹೆಸರಿಗೆ ತಕ್ಕಂತೆ ರೂಪವತಿಯೇ ಆಗಿದ್ದೆ. ನವಿರಾದ ಮೈಮಾಟ, ಸುವರ್ಣದ ಹೊಳಪು, ನನ್ನನ್ನು ಕಂಡರೆ ಯಾರಿಗಾದರೂ ಪ್ರೀತಿ ಗೌರವ ಅಲ್ಲದೇ, ಪಡೆಯಬೇಕೆಂಬ ಆಸೆ ಹಂಬಲ. ಪಡೆದಮೇಲಂತೂ ಸಂಪೂರ್ಣ ಸಂತೃಪ್ತಿ. ನನ್ನನ್ನು ಪಡೆದ ಜನರಲ್ಲಿ ಅದೆಂತಹ ಶಕ್ತಿಚೇತನ ನಾನು ತುಂಬುತ್ತಿದ್ದೆ. ನನಗೆ ಅಚ್ಚರಿ! ನನ್ನಿಂದ ಭಕ್ಷ್ಯಭೂರಿಭೋಜನ, ವಸ್ತ್ರಅಲಂಕಾರ, ಜಾತ್ರೆ, ಉತ್ಸವ ಏನಾದರೂ ಮಾಡಬಹುದು. ಸಾಮಾನ್ಯರ ಕಣ್ಣಿಗೆ ನಾ ಬೀಳಬಾರದೆಂದು ನನ್ನನ್ನು ಹಿಡಿದೆತ್ತಿ, ಮುಚ್ಚಿಟ್ಟು ದೃಷ್ಟಿ ತೆಗೆಯುವರು. ಬಾಲ್ಯದ ಒಂದೊಂದು ಸ್ಮರಗಳನ್ನು ನೆನೆಸಿಕೊಂಡರೆ ಮೈ ಜುಮ್ಮೆನ್ನುವುದು. ಮುಖದಲ್ಲಿ ಲಜ್ಜೆಯಾಡುವುದು.

ಈಗ ನಾನು ಬೆಳೆದೆ. ಬೆಳೆದು ದೊಡ್ಡವಳಾದೆ. ನಾನು ಬೆಳೆದಂತೆ ನನ್ನ ಕಳೆ ಕುಂದಿತು. ಬೆಲೆ ಇಳಿಯಿತು. ನನ್ನನ್ನು ಪಡೆಯಲು ಅವಿರತ ಹಂಬಲಿಸಿದ ಜನ ಈಗ ಅಸಹ್ಯದಿಂದ ನನ್ನ ಕಡೆಗೆ ನೋಡುವರು. ವ್ಯಂಗ್ಯವಾಗಿ ನಗುವರು, ಮುಖಭಂಗದಿಂದ ಮೈ ಕಪ್ಪಾಗಿದೆ. ಸಂಕೋಚದಿಂದ ಮುದುಡಿ ಮೈಸಣ್ಣಾಗಿದೆ. ನನ್ನ ಹೆಸರಿನ ಪೂರ್ವಾರ್ಧವನ್ನು ತೆಗೆದುಕೊಂಡು 'ರೂಪಿ' ಎಂದು ಕರೆದ ಜನರು ಇಂದು ಉತ್ತರಾರ್ಧವನ್ನೇ ಎತ್ತಿಕೊಂಡು 'ಆಯಿ' ಎಂದು ಕರೆಯುತ್ತಿರಬಹುದು. ಹರೆಯದಲ್ಲಿಯೇ ಮುದುಕಿಯಾದ ಅನುಭವ. ನನ್ನ ಪಡೆದ ಜನ ಭೂರಿಭೋಜನ, ಬಟ್ಟೆಯಂತೂ ಹೋಗಲಿ ಸಿಗರೇಟು ಬಿಸ್ಕೇಟು ಪೊಟ್ಟಣಗಳನ್ನೂ ಪಡೆಯಲು ಸಾಧ್ಯವಿಲ್ಲ. ಇಂದು ನಾನು ಒಂದು ಕಪ್ಪು ಕಾಫಿ ಇಲ್ಲವೇ ಚಹಾಕ್ಕೆ ಸಮಾನ. ಯಾರು ಬಲ್ಲರು ಕಾಲಚಕ್ರವನ್ನು ? ನಾಳೆ ನನ್ನನ್ನು ಒಂದು ಚಾಕಲೇಟು ಇಲ್ಲವೇ ಒಂದು ಅಡಿಕೆಗೆ ಮಾರಬಹುದು. ಭಯವಾಗುತ್ತಿದೆ—ಇನ್ನಷ್ಟು ದಿನಕ್ಕೆ ಭಿಕ್ಷುಕರಾದರೂ ನನ್ನನ್ನು ಸ್ವೀಕರಿಸುವರೇ ಎಂದು. ಕೇಳುವರಾರು ಈ ಹೆಣ್ಣಿನ ಕಣ್ಣೀರಿನ ಕಥೆಯನ್ನು ?

**ಎಸ್. ರಾಚಯ್ಯ**

# ಪುಸ್ತಕಾವಲೋಕನ

---

**ಭಾರತದಲ್ಲಿ ಬ್ಯಾಂಕಿಂಗ್ ಕಾನೂನು ಮತ್ತು ಆಚರಣೆ:** ಟಿ. ಎಂ. ಪಂಡಿತ್; ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ; ಪು. 509 + 11 ಬೆಲೆ: ಸಾದಾ ಪ್ರತಿ ರೂ. ೧೩ ಉತ್ತಮ ಪ್ರತಿ ರೂ. ೧೬

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ದ್ವಿತೀಯ ಬಿ.ಕಾಂ. ಪಠ್ಯಪುಸ್ತಕವನ್ನಾಗಿ ಕುಮಟಾದ ಎ. ವಿ. ಬಾಳಿಗಾ ವಾಣಿಜ್ಯ ಕಾಲೇಜಿನಲ್ಲಿ ವಾಣಿಜ್ಯ ಹಾಗೂ ಬ್ಯಾಂಕಿಂಗ್ ಶಾಸ್ತ್ರಗಳ ಪ್ರಾಚಾರ್ಯರಾಗಿರುವ ಶ್ರೀ ಟಿ. ಎಂ. ಪಂಡಿತ್‌ರವರಿಂದ ಈ ಗ್ರಂಥವನ್ನು ಬರೆಯಿಸಿದ್ದಾರೆ. ಬಿ.ಕಾಂ. ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯದವರು ಬ್ಯಾಂಕಿಂಗ್ ಶಾಸ್ತ್ರಕ್ಕೆ ನಿಗದಿಮಾಡಿರುವ ಪಠ್ಯಕ್ರಮಕ್ಕೆ ಅನುಗುಣವಾಗಿಯೇ ಈ ಪುಸ್ತಕವನ್ನು ರಚಿಸಲಾಗಿದೆ. ಬ್ಯಾಂಕರ್, ಗ್ರಾಹಕ ಎಂಬ ಪದಗಳ ವ್ಯಾಖ್ಯೆಯಿಂದ ಹಿಡಿದು, ಇಂದಿನ ಬ್ಯಾಂಕುಗಳಲ್ಲಿ ಪ್ರಚಲಿತವಿರುವ ವಿವಿಧ ಠೇವಣಿಗಳ, ಸಾಲಗಳ ವಿವಿಧ ರೀತಿಯ ಮುಂಗಡ ಸೌಲಭ್ಯಗಳ ವಿಶ್ಲೇಷಣೆ, ಚೆಕ್ಕುಗಳು ಹಾಗೂ ಇತರ ಪರಕ್ರಾಮ್ಯ ಸಂಲೇಖಗಳು, ಭಾರತದ ಪರಕ್ರಾಮ್ಯ ಸಂಲೇಖಗಳ ಅಧಿನಿಯಮ 1881, ಬ್ಯಾಂಕಿಗ್ ನಿಯಂತ್ರಣ ಅಧಿನಿಯಮ 1949 ಮುಂತಾದುವೇ ಅಲ್ಲದೆ ಇಂದು ಬ್ಯಾಂಕುಗಳು ನೀಡುತ್ತಿರುವ ವಿವಿಧ ಅನುಬಂಧಿ ಸೇವೆಗಳು, ಬ್ಯಾಂಕುಗಳ ಉದರಿ ಸೃಷ್ಟಿ ಮುಂತಾದ, ಬ್ಯಾಂಕಿಂಗಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಸರಳವಾದ ಭಾಷೆಯಲ್ಲಿ ವಿದ್ಯಾರ್ಥಿಗಳಿಗೆ ಅರ್ಥವಾಗುವ ಶೈಲಿಯಲ್ಲಿ ಬರೆಯಲಾಗಿದೆ. ಪ್ರತಿಯೊಂದು ವಿಷಯವನ್ನು ವಿವರಿಸುವಾಗಲೂ ಬರೀ ಪಾಂಡಿತ್ಯದ ದೃಷ್ಟಿಯಿಂದ ತಾತ್ವಿಕವಾಗಿಯೇ ಬರೆಯದೆ ಒಂದು ವ್ಯವಹಾರವನ್ನು ಇಂದಿನ ಬ್ಯಾಂಕುಗಳಲ್ಲಿ ನಿರ್ವಹಿಸುವಾಗ ಕೈಗೊಳ್ಳಬೇಕಾದ ಪ್ರತಿಯೊಂದು ಕ್ರಮವನ್ನೂ ಲೇಖಕರು ವಿವರಿಸಿದ್ದಾರೆ. ಬ್ಯಾಂಕುಗಳ ಎಲ್ಲ ವಿದ್ಯಮಾನಗಳ ಕಲ್ಪನೆ ವಿದ್ಯಾರ್ಥಿಗಳಿಗೆ ಉಂಟಾಗುವಂತೆ ಬರೆದಿದ್ದಾರೆ. ಉದಾಹರಣೆಗೆ, ಠೇವಣಿಗಳ ವಿಷಯವನ್ನು ವಿವರಿಸುವಾಗ ಆಯಾ ಠೇವಣಿ ಖಾತೆಗಳನ್ನು ತೆರೆಯುವಾಗ ಅರ್ಜಿದಾರರಿಂದ ಅರ್ಜಿಗಳಲ್ಲಿ ಪಡೆದುಕೊಳ್ಳುವ ಅಂಶಗಳನ್ನೂ ರೀತಿ ನಿಯಮಗಳನ್ನೂ ತಿಳಿಸಿದ್ದಾರೆ. ಖಾತೆಗಳನ್ನು ಮುಕ್ತಾಯಗೊಳಿಸುವ ಕ್ರಮಗಳನ್ನೂ ತಿಳಿಸಿದ್ದಾರೆ. ಹಾಗೆಯೇ ಸಾಲ ಸೌಲಭ್ಯ ಹಾಗೂ ಮುಂಗಡಗಳ ವಿಷಯವನ್ನು ಹೇಳುವಾಗ ಕೆಲವು ರೀತಿಯ ಸಾಲಗಳನ್ನು ನೀಡುವಾಗ ಬ್ಯಾಂಕುಗಳು ಇಂದು ಪಡೆಯುತ್ತಿರುವ ಪತ್ರಗಳು, ಅವನ್ನು ಪಡೆಯುವ ವಿಧಾನಗಳು—ಇವುಗಳ ಪರಿಚಯವನ್ನೂ ನೀಡಿದ್ದಾರೆ.

ಇದು ಬ್ಯಾಂಕಿಂಗ್ ವಿದ್ಯಾರ್ಥಿಗಳಿಗೆ ಭಾರತದ ಬ್ಯಾಂಕುಗಳಲ್ಲಿನ ವ್ಯವಹಾರ ವಿಧಾನಗಳ ಜ್ಞಾನವನ್ನು ಮೂಡಿಸುವುದೇ ಅಲ್ಲದೆ ಹೊಸದಾಗಿ ಬ್ಯಾಂಕ್ ಉದ್ಯೋಗಗಳಿಗೆ ಸೇರುತ್ತಿರುವವರಿಗೂ ಬ್ಯಾಂಕು ವ್ಯವಹಾರ ಮಾಡುವವರಿಗೂ ಒಂದು ಸೂಕ್ತ ಪರಿಜ್ಞಾನವನ್ನು ನೀಡಬಲ್ಲುದಾಗಿದೆ. ಜನಸಾಮಾನ್ಯರಿಗೂ ಪ್ರಸಕ್ತ ಬ್ಯಾಂಕಿಂಗ್ ವಿಷಯಗಳ ಬಗ್ಗೆ ವಾಸ್ತವಿಕ ಅರಿವನ್ನು ನೀಡಬಲ್ಲ ಉತ್ತಮ ಪುಸ್ತಕವಾಗಿದೆ ಇದು.

ಈ ಹೊತ್ತಗೆಯಲ್ಲಿ ಯಾವುದೇ ವೈಚಾರಿಕ ಲೋಪಗಳು ಕಂಡುಬರುವುದಿಲ್ಲ. ಆದರೆ ಇಂಗ್ಲಿಷಿನಲ್ಲಿ ಬಳಕೆಯಲ್ಲಿರುವ ಹಲವಾರು ಬ್ಯಾಂಕಿಂಗ್ ಹಾಗೂ ವಾಣಿಜ್ಯ ಶಬ್ದಗಳಿಗೆ ಲೇಖಕರು ಬಳಸಿರುವ ಕನ್ನಡದ ಸಮಾನ ಶಬ್ದಗಳು ಬಳಕೆಯಲ್ಲಿರುವ ಶಬ್ದಗಳಲ್ಲದೆ ಬೇರೆಯಾಗಿವೆ.

ಯಾವ ಶಬ್ದವನ್ನೇ ಬಳಸಿರಲಿ, ಲೇಖಕರು ಆಯಾ ಶಬ್ದಗಳ ಪಕ್ಕದಲ್ಲಿಯೇ ಅದರ ಇಂಗ್ಲಿಷ್ ಪದವನ್ನೂ ಕಂಸಗಳಲ್ಲಿ ಕೊಟ್ಟಿರುವುದರಿಂದ ಸಂದೇಹಗಳಿಗೆ ಎಡೆಯಿಲ್ಲದಂತಾಗಿದೆ.

ಕನ್ನಡದಲ್ಲಿ ಬ್ಯಾಂಕಿಂಗ್ ಬಗ್ಗೆ ಇರುವ ಗ್ರಂಥಗಳು ಬಹು ವಿರಳ. ಲೇಖಕರು ಈ ಹೊತ್ತಗೆಯನ್ನು ಸರಳವಾಗಿ ಕನ್ನಡದಲ್ಲಿ ಸ್ಪಷ್ಟವಾಗಿ ಬರೆಯುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ.

—ಎಂ. ವಿ. ಎಂ. ಪ್ರಸಾದ್

*With Best Compliments From*

# NGEF LTD

## P. B. No. 3876, Bangalore-560 038

***Manufacturers of :***

DISTRIBUTION AND POWER TRANSFORMERS UPTO 440 MVA 400KV. WIDE RANGE OF MOTORS FROM 0.25hp. TO 4500hp. HIGH AND LOW VOLTAGE SWITCHGEAR. SILICON DIODES AND HIGH CURRENT RECTIFIERS

**NGEF also undertakes TURNKEY ELECTRIFICATION**

***Sales Offices at :***

**BANGALORE**
P. B. No. 5190
'Chandra Kiran',
10–A, Kasturba Road,
BANGALORE-560 001.

**MADRAS**
P. B. No. 762
Fagun Mansion,
19, Commander-in-Chief Road,
MADRAS-600 008.

**SECUNDERABAD**
P. B. No. 1648
Chandralok Complex,
111, Sarojini Devi Road,
SECUNDERABAD-500 003.

**BOMBAY**
P. B. No. 6279
Tiecicon House,
Haines Road, Mahalaxmi,
BOMBAY-400 011.

**CALCUTTA**
P. B, No. 9234
7-B. Middleton Street,
CALCUTTA-700 071.

**AHMEDABAD**
Metro Commercial Centre,
High Court Marg,
Navrangpur
AHMEDABAD-380 009.

**BHOPAL**
P. B. No. 310
S-11, Guru Teg Bahadur Complex,
Rashanpura,
Central T. T. Nagar.
BHOPAL-462 003.

**NEW DELHI**
P. B. No. 633
Bank of Baroda Building,
(Fifth Floor)
16, Parliament Street,
NEW DELHI-110 001.

**KANPUR**
B-10. Sarvodaya Nagar,
KANPUR-208 005.

**PROJECTS/EXPORT DIVISION**
P. B. No. 3876
BANGALORE-560 038.

*Hope Lights A Candle will it make a career?*

# CANARA BANK

When the hands of poverty get hold of a master mind, one more outstanding brain descends into nothingness.

CANARA BANK'S philosophy sought to reverse this unfortunate trend. Thus was born the CANARA BANK Golden Jubilee Education Fund in 1956. Inspired by its founder's love for education the Fund was designed to help needy students on merit-cum-means basis for pursuing professional courses of studies. Granting long term loans, 25 years ago, at 4% interest (simple) repayable a year after completion of education.

**Something Unique, Pioneering and Pace Setting**

A closely linked service is the Book Bank Scheme to lend costly professional books to Students

Thousands of students have benefited from these year after year. Some in India and others abroad, working in different disciplines and occupations; Doctors, Teachers, self-employed industrialists and many more.

**All because, one man had a vision**
**And his Bank sought to fulfil it**

SERVING TO GROW — GROWING TO SERVE

## CANARA BANK

**(A nationalised bank)**

H. O. BANGALORE-2

**Over 1390 branches throughout the country**

**INVEST IN THE BEST EDUCATION**
**FOR YOUR CHILD**
**THROUGH OUR**
**VIJAYA EDUCATION PLAN**

Deposit a fixed amount or save a small amount every month for a period of 63, 72, 84, 96, 108 or 120 months depending on the age of your child.

Two months after the instalment, we'll pay you a fixed amount every month, for a period of 6 years. Your savings and our interest, together will give your child the education he/she deserves.

Write to us for more details or drop in at your nearest Vijaya Bank Branch.

# VIJAYA BANK

(Wholly owned by the Government of India)

**H. O. 2, RESIDENCY ROAD, BANGALORE-560 025**

# ಕರ್ನಾಟಕದ ಭಾವೀ ಕೈಗಾರಿಕೋದ್ಯಮಿಗಳಿಗೆ
# ಕೆ. ಎಸ್. ಎಫ್. ಸಿ. ಯ
# ಸ್ವಾಗತ

ಕರ್ನಾಟಕದಲ್ಲಿ ಎಲ್ಲೇ ಇರಲಿ ಎಷ್ಟೇ ಸಣ್ಣದಿರಲಿ, ನಿಮ್ಮ ಕೈಗಾರಿಕಾ ಯೋಜನೆಗಳಿಗೆ ಹಣ ಸಹಾಯ ಕೆ. ಎಸ್. ಎಫ್. ಸಿ.ಯಿಂದ ದೊರೆಯುತ್ತದೆ. ಹಣವಿಲ್ಲದೆ ನಿಮ್ಮ ಯೋಜನೆಗಳು ಮೂಲೆ ಸೇರಬೇಕಿಲ್ಲ. ನಿಮ್ಮ ಆವಶ್ಯಕತೆಗಳಿಗೆ ಸರಿಹೊಂದುವಂತೆ ರೂಪಿಸಿದ ಹಣ ಸಹಾಯದ ಹಲವಾರು ವಿಧಾನಗಳು ನಮ್ಮಲ್ಲಿವೆ. ನಿಮ್ಮ ಯೋಜನೆಗಳೊಂದಿಗೆ ನಮ್ಮಲ್ಲಿಗೆ ಬನ್ನಿ. ನಿಮಗೆ ಸದಾ ಸ್ವಾಗತ.

ಕಡಿಮೆ ಬಡ್ಡಿ ದರಗಳಲ್ಲಿ ಮೂವತ್ತು ಲಕ್ಷ ರೂ.ಗಳ ವರೆಗಿನ ಸಾಲ ನಿಮಗೆ ದೊರೆಯುತ್ತದೆ. ಕಡಿಮೆ ಭದ್ರತಾಮಿತಿ, ಸುಲಭ ಪರತ್ತುಗಳು, ಅದರಲ್ಲೂ ಕೈಗಾರಿಕೆಯಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಸ್ಥಾಪಿಸಲಾಗುವ ಯೋಜನೆಗಳಿಗೆ ವಿಶೇಷ ಪ್ರೋತ್ಸಾಹ. ನಮ್ಮ ಹಲವಾರು ನೆರವಿನ ಯೋಜನೆಗಳಲ್ಲಿ ನಿಮ್ಮ ಅಗತ್ಯಕ್ಕೆ ಒಂದಾದರೂ ಸರಿಹೊಂದಬಹುದು.

ಹೆಚ್ಚಿನ ವಿವರಗಳನ್ನು ಇವರಿಂದ ಪಡೆಯಿರಿ :

**ಉಪ ವ್ಯವಸ್ಥಾಪಕರು (ಉದ್ಯಮಿಗಳ ಮಾರ್ಗದರ್ಶನ)**
**ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ**
25, ಮಹಾತ್ಮಾ ಗಾಂಧಿ ರಸ್ತೆ
ಬೆಂಗಳೂರು–560 001

ಪ್ರಾದೇಶಿಕ ಕಛೇರಿಗಳು :

ಬೆಂಗಳೂರು, ಮೈಸೂರು, ಹುಬ್ಬಳ್ಳಿ, ತುಮಕೂರು ಮತ್ತು ಗುಲ್ಬರ್ಗಾ

ಶಾಖೆಗಳು :

ಮಂಗಳೂರು, ರಾಯಚೂರು, ಶಿವಮೊಗ್ಗ, ಬೆಳಗಾಂ, ಬಿದರೆ ಮತ್ತು ಬಿಜಾಪುರ

ಶು ಭಾ ಶ ಯ ಗ ಳೊ ಂ ದಿ ಗೆ



## ಶ್ರೀ ಗುರುಪಾದಪ್ಪ ಸಿದ್ಧಪ್ಪ ಉಪ್ಪಿನ

ಶ್ರೀ ಶಾಂತೇಶ್ವರ ವಿದ್ಯುತ್ ಮೋಟಾರ್
ಮಾರಾಟಗಾರರು



ಸಿಂದಗಿ ೫೮೬ ೧೨೮

ಬಿಜಾಪುರ ಜಿಲ್ಲೆ